Photo by N. Ramakrishna



ಬಹುಮಾನ
ಪಡೆದ ಶೀರ್ಷಿಕೆ

ನೂಲಿಲ್ಲದ ಬಲೆಯಲ್ಲಿ

ಕಳಿಸಿದವರು:
ಪಿ. ಪುರುಷೋತ್ತಮ ಸರಳಾಯ

## ಶೀಘ್ರದಲ್ಲೇ ಬರುತ್ತದೆ!




ಕಥೆ ಮತ್ತು ಹಾಡುಗಳು: ತಾಪಿ, ಶ್ರೀಶ್ರೀ ಮತ್ತು ಆರುದ್ರ
ಸಂಗೀತ: ಪ್ರಸಾದರಾವ್ ಮತ್ತು ಕೇಳ್ಕರ್
ಕ್ಯಾಮೆರಾ: ಪಿ. ಎಲ್. ರಾಯ್

ಡಿಸ್ಟ್ರಿಬ್ಯೂಟರುಗಳು:

| ಆಂಧ್ರ-ಸೀಡೆಡ್ | ನೈಜಾಂ | ಮೈಸೂರ್ |
|---|---|---|
| ನವಯುಗ ಫಿಲ್ಮ್ಸ್ | ಆಲ್ ಇಂಡಿಯ ಕಾರ್ಪೊರೇಷನ್, ಲಿ. | ಕರ್ನಾಟಕ ಫಿಲ್ಮ್ಸ್, ಲಿ. |
| ವಿಜಯವಾಡ-ಗುಂತಕಲ್ | ಸಿಕಂದರಾಬಾದು | ಬೆಂಗಳೂರು 2. |

ವಿವರಗಳಿಗೆ: ದಿ ಫಿಲ್ಮ್ ಫೈನಾನ್ಸ್ ಕಾರ್ಪೊರೇಷನ್, ಮದರಾಸ್ - ೧೦

# ಈ ಸಂಚಿಕೆಯಲ್ಲಿ

# ಚಂದಮಾಮ

ಸಂಚಾಲಕರು : ಶ್ರೀ 'ಚಕ್ರಪಾಣಿ'

ನಮ್ಮ ದೇಶವು ರಾಜಭಕ್ತಿಗೆ ಹೆಸರುವಾಸಿಯಾದ ದೇಶ. ರಾಜ್ಯಕ್ಕಾಗಿ ರಾಜನಿಗಾಗಿ ಪ್ರಾಣವನ್ನು ಕೂಡಾ ಕೊಡಲು ಹಿಂದೆ ಮುಂದೆ ನೋಡದ ಮಂತ್ರಿಗಳೂ ಭೃತ್ಯರೂ ನೂರಾರುಮಂದಿ ಇದ್ದರು. ಅಂತಹವರಲ್ಲಿ ಒಬ್ಬನಂತಿದ್ದಾನೆ ಈ ಸಂಚಿಕೆಯಲ್ಲಿರುವ ಕಾನಿಷ್ಕನ ಕಥೆಯ ಮಂತ್ರಿ. ಕಾನಿಷ್ಕನು ದಯಾಶೀಲ; ಧೈರ್ಯಶಾಲಿ. ಅಂತಹವನನ್ನು ಅವಮಾನಿಸಬೇಕೆಂದಿದ್ದ ಸಾಮಂತರಾಜ. ಆಗ ಅದೇ ಅವನಿಗೆ ಸಂಕಟವನ್ನು ತಂದಿಟ್ಟಿತು. ಅಂತಹ ಸಮಯದಲ್ಲಿ ಪ್ರಭುಭಕ್ತಿಪರಾಯಣನಾದ ಚತುರ ಮಂತ್ರಿ ತನ್ನ ಕೈಯನ್ನು ತುಂಡಿಸಿಕೊಂಡುಬಿಟ್ಟ. ಇಂತಹ ತ್ಯಾಗವನ್ನಾದರೂ ಮಾಡದಿದ್ದರೆ ಕಾನಿಷ್ಕನಂತಹ ಧರ್ಮಪ್ರಭುವನ್ನು ನಂಬಿಸಲು ಸಾಧ್ಯವಿರಲಿಲ್ಲ. ಇದರಿಂದ ತಾನೇ ಕಾನಿಷ್ಕನ ಮನಸು ಕರಗಿ ಎಲ್ಲಾ ಶುಭವಾಯ್ತು? ಅಂತೆಯೇ ತ್ಯಾಗಕ್ಕೆ ಯಾವಾಗಲೂ ಹಿರಿಯ ಸ್ಥಾನವಿದೆ. ಇದೇ ವಿಧವಾಗಿ 'ಪೂಜಾರಿಯ ದ್ರೋಹ', 'ಧನ ಲೋಭ' ಮೊದಲಾದ ಇತರ ಕಥೆಗಳನ್ನೂ ಗ್ರಹಿಸಿರಿ.

ಸಂಪುಟ ೧೩ : ಅಕ್ಟೋಬರ್ ೧೯೫೪ : ಸಂಚಿಕೆ ೪








# ಕಿರೀಟ - ಕೋತಿ

ಸಹಜ ಘನತೆಯೇ ಕಿರೀಟವೆನಿಸಿ
ಮಹಾರಣ್ಯವನು ಆಳುವ ಸಿಂಗ
ಗುಹೆಯ ಮುಂದೆ ಸತ್ತಿಹುದನು ಕಾಣುತೆ
ಹಾಹಾಕರಿಸಿತು ಕಾಡು ಮೃಗಾಂಗ

ಅಳಿಲಿನಿಂದ ಮತ್ತೇಭದ ವರೆಗೆ
ಅಡವಿಯಲ್ಲಿರುವ ಮೃಗಗಳು ಎಲ್ಲಾ
ಅಳುತಳುತಲೆ ಸಭೆ ಸೇರಿಸಿ ಕೇಳ್ದವು :
"ಇನ್ನಾಳುವುದಾರ್ ನಮ್ಮನು ಎಲ್ಲಾ ?"

"ಗಜಾನನನ ದಯೆ ನಮಗಿರಲೆ"ನ್ನುತ
ಗಜರಾಜನ ನಾಕಡೆ ಕಳಿಸಿ,
ರಾಕ್ಷಸ ರಕ್ಷಿತ ರತ್ನಕಿರೀಟವ
ತತ್ ಕ್ಷಣವೇ ಅಲ್ಲಿಗೆ ತರಿಸಿ

ಯಾರ ತಲೆಗೆ ಇದ ನಿಡಬೇಕೆನ್ನುತ
ವಾದವೇಳೆ, ಮುದಿನರಿ ಕಡೆಗೆ,
"ಯಾವತಲೆಗೆ ಅದು ಸರಿಹೋಗುವುದೊ
ಆ ತಲೆ ಮೃಗವೇ ಅರಸೆಮಗೆ"

ಎಂದಾ ಮಾತಿಗೆ ಎಲ್ಲ ಜಂತುಗಳು
"ಅದು ಸರಿಸರಿ" ಎಂದೊಪ್ಪಿದುವು.
ಕೋತಿ ಕಿರೀಟವ ಕೈಗೊಂಡೆದ್ದಿತು
ಎಲ್ಲವು ತಲೆಯನು ತಗ್ಗಿದುವು.

ಯಾವ ತಲೆಗೆ ಆ ಕಿರೀಟವಿಟ್ಟರು
ಹೊಂದಲಿಲ್ಲವೇನೋ ಒಂದು;

"ಮಾರಂಗ"

ಮುಖವೊ ಮೂಗೊ ಕೊಂಬೊ ಕಿವಿಯೊ
ಕಿರೀಟಕ್ಕೆ ತಡೆಯಾಯ್ತೆಂದು.

ಎಲ್ಲಾ ಮೃಗಗಳ ಪರೀಕ್ಷೆ ಮುಗಿದು
ತನ್ನ ಸರದಿಬರಲಾ ಕಪಿಯಾಗ
ತನ್ನ ತಲೆಗಿಟ್ಟು ಬೀಳದೋಲ್ ಪಿಡಿದು
ಕುಣಿಯುತೆ ಹಾಡಿತು ಕೀಚ್‌ರಾಗ!

ನಲಿವಾ ಕೋತಿಯ ಬೆರಗಿಂ ನೋಡುತ
ಇತರ ಮೃಗಂಗಳು ಘೋಷಣಗೈದುವು:
"ಜಂತುಸ್ಥಾನಕೆ ಜಯವಾಗಲಿ! ಹನು
ಮಂತ ಸ್ವಾಮಿಗೆ ಜೈ ಜೈ!" ಎಂದುವು.

ತಾನೇ ರಾಜೆಂದುಬ್ಬುವ ಕೋತಿಯ
ಕಾಣಲಾ ನರಿಗೆ ಬೇಸರವೆನಿಸಿತು.
"ಕೋತಿ ಬುದ್ಧಿ ಕಾಂಬಿರಿ ಈಗಲೆ, ಓ
ರಾಜಾ ಹೊಂಡಕೆ ಹಾರೋ" ಎಂದಿತು.

ಸಂತಸದಿಂದಲಿ ಕುಣಿಯುವ ಕೋತಿ
ಜಂಬುಕ ತೋರ್ದಾ ಹೊಂಡಕೆ ಹಾರಿತು!
ಆಯ್ಯೊ ಪಾಪ! ಅಲ್ಲಾರೋ ಮಡಗಿದ
ಕತ್ತಿಯಬೋಳ ಹಾ! ಬಾಯ್ದೆರೆದಿದ್ದಿತು!

ಬೋನಲಿ ಸಿಕ್ಕಿ ಕಟಕಟ ನಲುಗುವ
ಕಪಿಯಕಂಡು ನರಿಯಂದಿತು: "ಅಯ್ಯೋ!
"ಸೂಕ್ಷ್ಮಬುದ್ಧಿ ಘನತೆಗಳೇನಿಲ್ಲದೆ
ಕೋತಿಯ ಬುದ್ಧಿಗೆ ಅರಸೊತ್ತಿಗೆಯೋ?"



## ಮುಖಚಿತ್ರ

ಪರಶುರಾಮನ ಕಥೆ ಅಲ್ಲಿಗೇ ಮುಗಿಯಲಿಲ್ಲ. ತನ್ನ ಕೋಪವು ತನ್ನಿಂದ ಎಂತಹ ಘೋರಕಾರ್ಯ ಮಾಡಿಸಿತೆಂದು ಜಮದಗ್ನಿಗೂ ಪಶ್ಚಾತ್ತಾಪವಾಯಿತು. ಅಂದಿನಿಂದ ಕೋಪವನ್ನು ಪೂರಾ ತ್ಯಜಿಸಿ ಪರಮಶಾಂತನಾದನು.

ಹೀಗಿರಲು ಒಂದು ದಿನ ಹೈಹಯ ರಾಜನಾದ ಕಾರ್ತವೀರಾರ್ಜುನನು ತನ್ನ ಪರಿವಾರದೊಂದಿಗೆ ಬೇಟೆಯಾಡಿಕೊಂಡು ಜಮದಗ್ನಿಯ ಆಶ್ರಮಕ್ಕೆ ಬಂದನು. ಆಗ ಪರಶುರಾಮನು ಸಮಿಧೆಗಳನ್ನು ತರಲು ಹೋಗಿದ್ದನು. ಜಮದಗ್ನಿ ತನ್ನ ಬಳಿಯಿದ್ದ ಹೋಮಧೇನುವಿನ ಸಹಾಯದಿಂದ, ರಾಜ–ಪರಿವಾರಗಳಿಗೆ ಬಲು ಚೆನ್ನಾಗಿ ಅತಿಥಿ ಸತ್ಕಾರ ಮಾಡಿದನು. ರಾಜನು ಅದಕ್ಕೆ ಕೃತಜ್ಞತೆ ತೋರಿಸುವುದಕ್ಕೆ ಬದಲು ಕೃತಘ್ನನಾದನು. ಜಮದಗ್ನಿ ಋಷಿಯ ಅತಿಶ್ರೇಷ್ಠವಾದ ಹೋಮಧೇನುವನ್ನು ಬಲಾತ್ಕಾರವಾಗಿ ಎಳೆದುಕೊಂಡು ಹೋದನು.

ಸ್ವಲ್ಪಹೊತ್ತಿಗೇ ಪರಶುರಾಮನು ಬಂದನು; ನಡೆದ ಸಂಗತಿಯನ್ನು ಅರಿತನು. ಕೂಡಲೇ ರೌದ್ರಾವೇಷದಿಂದ ಕೊಡಲಿಯೊಂದಿಗೆ ಹೋಗಿ, ಕಾರ್ತವೀರಾರ್ಜುನನನ್ನು ನಡುದಾರಿಯಲ್ಲಿಯೇ ತಡೆದನು. ಘೋರ ಕಾಳಗವಾಯಿತು. ವೀರ ಪರಶುರಾಮನು ಕಾರ್ತವೀರಾರ್ಜುನನನ್ನೂ ಅವನ ಪರಿವಾರವನ್ನೂ ಕೊಂದು ಹೋಮಧೇನುವನ್ನು ಬಿಡಿಸಿಕೊಂಡನು. ಪರಶುರಾಮನ ಪರಾಕ್ರಮಕ್ಕೆ ಎಲ್ಲರೂ ಬೆರಗಾದರು.

ಕಾರ್ತವೀರಾರ್ಜುನನ ಮಕ್ಕಳೂ ಮಹಾ ಕ್ರೂರರೇ. ಆದರೆ ಪರಶುರಾಮನ ಇದಿರು ಹಗೆ ತೀರಿಸಿಕೊಳ್ಳಲು ಅಂಜಿಕೊಂಡರು. ಅದಕ್ಕಾಗಿ ಹೊಂಚುಹಾಕಿ, ಪರಶುರಾಮನು ಇಲ್ಲದವೇಳೆ ನೋಡಿಕೊಂಡು ಆಶ್ರಮಕ್ಕೆ ನುಗ್ಗಿದರು. ಮತ್ತು ಜಮದಗ್ನಿಯನ್ನು ಕೊಂದುಹಾಕಿ ಓಡಿಹೋದರು.

ಪರಶುರಾಮನು ಬಂದು ರೋದಿಸುವ ತಾಯಿಯಿಂದ ಸಂಗತಿಯರಿತನು. ಕೋಪ ಸಂತಾಪಗಳಿಂದ "ಭೂಮಿಯಲ್ಲಿ ಕ್ಷತ್ರಿಯರ ವಂಶವೇ ಇಲ್ಲದಂತೆ ಮಾಡುತ್ತೇನೆ" ಎಂದು ಪ್ರತಿಜ್ಞೆಮಾಡಿದನು ಪರಶುರಾಮ. ಹಾಗೆಯೇ ಕಾರ್ತವೀರಾರ್ಜುನನ ಎಲ್ಲ ಮಕ್ಕಳನ್ನೂ ಕೊಂದುಹಾಕಿದನು. ನಂತರ ಇಪ್ಪತ್ತೊಂದುಸಾರಿ ಪೃಥ್ವಿಯನ್ನು ಸುತ್ತಿ ಕ್ಷತ್ರಿಯ ಸಂಹಾರ ಮಾಡಿದನು. ಕ್ಷತ್ರಿಯರ ರಕ್ತದಿಂದಲೇ ತಂದೆಗೆ ತರ್ಪಣ ಬಿಟ್ಟನು. ಪಿತೃಗಳೇ ಪ್ರತ್ಯಕ್ಷರಾಗಿ ಅವನನ್ನು ತಣಿಸಿದರು.

ನಂತರ ಪರಶುರಾಮನು ಶಾಂತನಾಗಿ ತಾನು ಗೆದ್ದ ಭೂಮಿಯನ್ನೆಲ್ಲಾ ಸಾತ್ವಿಕರಿಗೆ ಒಪ್ಪಿಸಿಕೊಟ್ಟು, ಮಹೇಂದ್ರ ಪರ್ವತಕ್ಕೆ ಹೋಗಿ ತಪಸ್ಸಿಗೆ ಕುಳಿತನು.




# ಕಳೆದು ಹೋದ ಗಾಳ

ಬಹಳಕಾಲದ ಹಿಂದೆ ಜಪಾನು ದೇಶದಲ್ಲಿ ಹೂರೀ, ಹೊದೇರಿ ಎಂಬ ಇಬ್ಬರು ಸಹೋದರರಿದ್ದರು. ಹೂರೀ ಪ್ರತಿದಿನಾ ಸಮುದ್ರ ತೀರಕ್ಕೆ ಹೋಗಿ ಮೀನು ಹಿಡಿಯುವನು. ಹೊದೇರಿ ಬಿಲ್ಲುಬಾಣ ಸಮೇತ ಅಡವಿಗೆ ಹೋಗಿ ಬೇಟೆಯಾಡುವನು. ಅಣ್ಣತಮ್ಮಂದಿರ ಸಿದ್ಧಾಂತಗಳಲ್ಲಿ ಬಹಳ ಭಿನ್ನತೆಯಿತ್ತು. ಹೂರೀ ಸದಾ ಗಂಭೀರವಾಗಿರುವನು; ಹೊದೇರಿ ಯಾವಾಗಲೂ ಉಲ್ಲಾಸವಾಗಿರುವನು. ಆದರೂ ಅವರಿಬ್ಬರಲ್ಲೂ ಪರಸ್ಪರ ಪ್ರೀತಿ ಬೆಳೆದು ಬಂದಿತ್ತು.

ಒಂದುದಿನ ಹೊದೇರಿ ಅಣ್ಣನ ಹತ್ತಿರ ಹೋಗಿ "ಅಣ್ಣಾ, ನೀನು ದಿನಾ ಮೀನು ಹಿಡಿಯುವೆ. ನಾನು ಬೇಟೆಗೆ ಹೋಗುತ್ತೇನೆ. ತಮಾಷೆಗೆ ಇಂದುಮಾತ್ರ ನೀನು ನನ್ನ ಬಿಲ್ಲು ಬಾಣಗಳನ್ನು ತೆಗೆದುಕೊಂಡು ಕಾಡಿಗೆ ಹೋಗು. ನಾನು ನಿನ್ನಗಾಳ ತೆಗೆದುಕೊಂಡು ಮೀನು ಹಿಡಿಯಲು ಹೋಗುತ್ತೇನೆ" ಎಂದ. ಈ ವ್ಯವಸ್ಥೆ ಹೂರೀಗೆ ಸಮ್ಮತವಾಗಲಿಲ್ಲ.

ಆದರೆ ತಮ್ಮನು ಬಲವಂತಪಡಿಸಲು, ಒಪ್ಪಿಕೊಳ್ಳಲೇಬೇಕಾಯಿತು. ಅಂದು ಹೂರೀ ಬೇಟೆಗೆ ಹೋದ. ಹೊದೇರಿ ಮೀನು ಹಿಡಿಯಲು ಹೊರಟ. ಸಾಯಂಕಾಲ ಒಂದು ಜಂತುವನ್ನಾದರೂ ಬೇಟೆಯಾಡದೆ ಬರಿಗೈಯಲ್ಲಿ ಹಿಂತಿರುಗಿದ ಹೂರೀ. ಹೊದೇರಿ ಒಂದು ಮೀನನ್ನಾದರೂ ಹಿಡಿಯಲಾರದೆ ಗಾಳವನ್ನೂ ಸಹ ಕಳೆದುಕೊಂಡು ಮನೆಗೆ ವಾಪಸು ಬಂದ.

"ನಾನು ಬೇಡಬೇಡವೆಂದರೂ ನೀನು ನನ್ನ ಮಾತು ಕೇಳಲಿಲ್ಲ. ನನ್ನ ಗಾಳಸಹ ಸಮುದ್ರದ ಪಾಲು ಮಾಡಿದೆ. ನಾನಿನ್ನು ಹೇಗೆ ಮೀನು ಹಿಡಿಯಲಿ?" ಎಂದು ನಿಷ್ಠೂರವಾಗಿ ನುಡಿದ ಹೂರೀ.

ತನ್ನಿಂದ ತಪ್ಪಾಯಿತೆಂದು ಹೊದೇರಿ ಒಪ್ಪಿಕೊಂಡ. "ಆ ಗಾಳ ಹೋದರೆ ಹೋಯಿತು. ನಿನಗೆ ನಾನು ನೂರು ಗಾಳಗಳನ್ನು ಮಾಡಿಕೊಟ್ಟೇನು" ಎಂದ. ಇದನ್ನು ಕೇಳಿ ಹೂರೀ ಕಟುವಾಗಿ "ನಿನ್ನ ನೂರು ಗಾಳ

ಆರ್. ವೆಂಕಟಕೃಷ್ಣ



ಗಳೇನೂ ನನಗೆ ಬೇಕಿಲ್ಲ. ಪಳಗಿದ ಗಾಳವದು. ಅದಿಲ್ಲದಿದ್ದರೆ ನನಗೆ ಕೈ ಕತ್ತರಿಸಿದಂತೆ ಆಗುವುದು" ಎಂದು ಹೇಳಿದ.

ಅಣ್ಣನ ವಿಚಾರಸರಣಿ ಸಮುಂಜಸವಾಗಿಲ್ಲದಿದ್ದರೂ ಸಹ, ತಪ್ಪು ತನ್ನದೇ ಆದುದರಿಂದ ಸಮುದ್ರದಲ್ಲಿ ಕಳೆದುಹೋದ ಗಾಳವನ್ನು ಹುಡುಕಿ ತರಲು ಹೊರಟ ಹೊದೇರಿ. ತನ್ನ ಪ್ರಾಣ ಹೋದರೂ ಸರಿ, ಆ ಗಾಳವಿಲ್ಲದೆ ಮನೆಗೆ ಹಿಂತಿರುಗುವುದಿಲ್ಲವೆಂದು ಶಪಥ ಮಾಡಿಕೊಂಡು ಮನೆಬಿಟ್ಟ.

ಸಮುದ್ರದಲ್ಲಿ ಒಂದು ಬಂಡೆಯಬಳಿ ಗಾಳ ಕಳೆದುಹೋಗಿತ್ತು. ಹೊದೇರಿ ಆ ಬಂಡೆಯ ಮೇಲಿಂದ ಸಮುದ್ರದೊಳಕ್ಕೆ ಹಾರಿದ. ಎಷ್ಟು ಆಳ ಹೋದರೂ ತಳಸಿಗದು! ಇನ್ನಷ್ಟುದೂರ ಹೋಗಲು ನೀರಿನ ತಳಭಾಗದಲ್ಲಿ ಏನೋ ಹೊಳೆಯುತ್ತಿರುವಂತೆ ತೋರಿತು. ಅದೊಂದು ಭವನ. ಅದರ ಸುತ್ತಲೂ ಕೆಲವು ಮರಗಳು ನೂರು ಅಡಿಗಳಿಗಿಂತಲೂ ಮಿಗಿಲಾಗಿ ಬೆಳೆದು ಉದ್ಯಾನ ವನದಂತೆ ತೋರುತ್ತಿದ್ದುವು. ಆ ಮರಗಳ ನಡುವೆ ಹೊದೇರಿ ಇಳಿದು ಏನು ಮಾಡಲೂ ತೋರದೆ ದಿಕ್ಕೆಟ್ಟಿರಲು, ತುಸ ದೂರದಲ್ಲಿದ್ದ ಭವನದಿಂದ ಸುಂದರ ಯುವತಿಯೋರ್ವಳು ಆತನ ಕಡೆಗೆ ಬರುತ್ತಿರುವುದು ಕಾಣಿಸಿತು. ಆಶ್ಚರ್ಯವಾಯಿತು.

ಆಕೆ ಹೊದೇರಿಯನ್ನು ಕಂಡು ಚಕಿತಳಾಗಿ "ಯಾರು ನೀವು?" ಎಂದು ಕೇಳಿದಳು.

ಹೊದೇರಿ ತನ್ನ ಕಥೆಯನ್ನೆಲ್ಲಾ ವಿವರವಾಗಿ ಆಕೆಗೆ ಹೇಳಿದ.

"ಹಾಗೋ. ಅದೋ ಅದೇ ನಮ್ಮ ಮನೆ. ನನ್ನೊಂದಿಗೆ ಬನ್ನಿ. ನೀವು ಕಳೆದುಕೊಂಡಿರುವ ಗಾಳವನ್ನು ನಮ್ಮ ತಂದೆ ಹುಡಕಿಸಿ ಕೊಡುವರು" ಎಂದಳು. ಹೊದೇರಿ ಆಕೆಯೊಂದಿಗೆ ಭವನವನ್ನು ಪ್ರವೇಶಿಸಿದ.

ಆ ಭವನ ಮುತ್ತಿನ ಚಿಪ್ಪಿನಿಂದಲೂ, ಹವಳದ ಸರಗಳಿಂದಲೂ, ನವರತ್ನಗಳಿಂದಲೂ ನಿರ್ಮಿತವಾಗಿ ನೋಡಲು ಸುಂದರವಾಗಿತ್ತು. ಅದು ಸಮುದ್ರರಾಜನ ಅರಮನೆ.

ಸಮುದ್ರರಾಜನು ಹೊದೇರಿಗೆ ಭಾರೀ ಸ್ವಾಗತವನ್ನಿತ್ತು ಭೋಜನಕೂಟಕ್ಕೆ ಏರ್ಪಾಡು ಮಾಡಿದ. ಊಟವಾದ ನಂತರ ರಾಜನು ವಿವಿಧ ಮೀನುಗಳನ್ನು ಕರೆದು, ತನ್ನ

ರಾಜ್ಯದಲ್ಲಿರುವವರನ್ನೆಲ್ಲಾ ಕೂಡಲೇ ಇಲ್ಲಿಗೆ ಕರೆದು ತರುವಂತೆ ಆಜ್ಞೆಮಾಡಿದ.

ಕ್ಷಣಮಾತ್ರದಲ್ಲಿ ಜಲಚರಗಳೆಲ್ಲಾ ಬಂದವು. ಹೊದೇರಿ ಕಳೆದುಕೊಂಡ ಗಾಳವನ್ನು ತಾವು ಯಾರೂ ನೋಡಲಿಲ್ಲವೆಂದರು.

ಇಷ್ಟರಲ್ಲಿ ಮಂತ್ರಿ ರಾಜನೊಂದಿಗೆ "ಮಹಾಪ್ರಭೂ, ಎಲ್ಲರೂ ಬಂದರು. ಆದರೆ ಸೊರೆಮೀನು ಬರಲಿಲ್ಲ. ಆಕೆಗೆ ಗಂಟಲು ನೋವಾಗಿರುವುದರಿಂದ ಮಲಗಿಕೊಂಡಿರುವ ಳಂತೆ. ವೈದ್ಯನಿಗಾಗಿ ಎದುರುನೋಡುತ್ತಿರುವ ರೆಂದು ಸುದ್ದಿಬಂದಿದೆ" ಎಂದ.

ಕೂಡಲೇ ರಾಜವೈದ್ಯನನ್ನು ಸೊರೆಮೀನಿನ ಮನೆಗೆ ಕಳುಹಿಸಿದರು. ಕೊಂಚಹೊತ್ತಿಗೆಲ್ಲಾ ಆತನು ಮೀನಿನ ಗಾಳವನ್ನು ಹಿಡಿದುಕೊಂಡು ಹಿಂತಿರುಗಿ ಬಂದ. ಅದು ಸೊರೆಮೀನಿನ ಗಂಟಲಲ್ಲಿ ಚುಚ್ಚಿಕೊಂಡಿರಲು ಶಸ್ತ್ರಚಿಕಿತ್ಸೆಮಾಡಿ ಹೊರಗೆ ತೆಗೆದರಂತೆ!

"ಓ, ಅದೇ ನಾನು ಕಳೆದುಕೊಂಡ ಗಾಳ" ಎಂದ ಹೊದೇರಿ ಆನಂದದಿಂದ. ಆತನು ಬಂದ ಕೆಲಸ ಪೂರ್ತಿಯಾಯಿತು. ಆದರೆ ಸಮುದ್ರರಾಜನ ಮಗಳಿಗೆ ಮಾತ್ರ ಹೊದೇರಿ ಹೊರಟು ಹೋಗುವುದು ಸ್ವಲ್ಪಮಾತ್ರವೂ ಇಷ್ಟವಿರಲಿಲ್ಲ.

"ನೀವಿಲ್ಲೇ ಇದ್ದುಬಿಡಿ. ನಾವಿಬ್ಬರೂ ಮದುವೆಯಾಗಿ ಸುಖವಾಗಿರೋಣ" ಎಂದು ಆಕೆ ಕೇಳಿಕೊಂಡಳು.

ಆಕೆಯನ್ನು ವಿವಾಹವಾಗಬೇಕೆಂಬ ಅಪೇಕ್ಷೆ ಹೊದೇರಿಗೂ ಇತ್ತು. ಆದರೆ ಆತನು



ತನ್ನ ಸಹೋದರನನ್ನು ಬಿಟ್ಟು, ತನ್ನ ಬೇಟೆಯನ್ನು ಬಿಟ್ಟು ಸಮುದ್ರದೊಳಗೇ ಇರಲಾರ.

"ನೀನೇ ನನ್ನೊಂದಿಗೆ ಬರಬಾರದೇಕೆ?'' ಎಂದ ಹೊದೇರಿ,

"ನಾನು ಈ ಸಮುದ್ರದಾಟಿ ಬಂದರೆ ನನ್ನರೂಪ ಬದಲಾಯಿಸುವುದು'' ಎಂದಳು.

ಹೊದೇರಿ ಸಮುದ್ರರಾಜ್ಯದಿಂದ ಹಿಂತಿರುಗಿ ಬಂದುಬಿಟ್ಟ. ಗಾಳ ಮತ್ತೆ ಸಿಕ್ಕಿದುದಕ್ಕಲ್ಲದಿದ್ದರೂ ತನ್ನ ತಮ್ಮನು ಮತ್ತೆ ಬದುಕಿ ಬಂದ ಸಲುವಾಗಿ ಹೂರೀ ಅಮಿತಾನಂದ ಹೊಂದಿದ. ತಾನು ತಮ್ಮನಿಗೆ ನಿಷ್ಠೂರವಾಗಿ ಮಾತನಾಡಿದುದಕ್ಕೆ ಹೂರೀ ಈಗ ತುಂಬಾ ನೊಂದುಕೊಂಡ.

ಹೊದೇರಿಗೆ ಈಗ ಬೇಟೆಯಮೇಲೆ ಆಸಕ್ತಿಯಿಲ್ಲ. ಆತನಿಗೆ ಮೂರು ಹೊತ್ತೂ ಸಮುದ್ರರಾಜನ ಮಗಳೇ ಕಾಣಿಸುವಳು. ಆತನು ದಿನಾ ಸಮುದ್ರ ತೀರಕ್ಕೆ ಹೋಗುವನು. ಅಲೆಗಳಕಡೆ ನೋಡುತ್ತಾ ನಿಟ್ಟುಸಿರು ಬಿಡುವನು.

ಒಂದುದಿನ ಹೊದೇರಿ ಸಮುದ್ರತೀರದಲ್ಲಿ ನಡೆದಾಡುತ್ತಿರಲು ಭಾರಿ ಅಲೆಗಳು ಚಲಿಸತೊಡಗಿದವು. ಬಿರುಗಾಳಿ ಬೀಸಿತು. ಈ ತೂಫಾನಿನಲ್ಲಿ ಸಮುದ್ರರಾಜನ ಮಗಳು ನೀರಿನಮೇಲೆ ತೇಲಿಕೊಂಡು ಸ್ವಲ್ಪ ಹೊತ್ತಿಗೆಲ್ಲಾ ಹೊದೇರಿಯ ಹತ್ತಿರ ಬಂದಳು.

ಹೊದೇರಿಯ ಆನಂದಕ್ಕೆ ಪಾರವೇ ಇಲ್ಲ. ಆತನು ಆಕೆಯನ್ನು ತನ್ನಅಣ್ಣನಬಳಿಗೆ ಕರೆದುಕೊಂಡು ಹೋದನು. ಹೂರೀ ಬಹಳ ಸಂತಸಗೊಂಡು ಅವರಿಬ್ಬರಿಗೂ ವಿವಾಹ ಮಾಡಿಸಿದನು. ಮೂರುದಿನ ಮೂವರೂ ಸಂತೋಷವಾಗಿ ಓಡಾಡಿದರು. ಆದರೆ ಮೂರನೆಯ ಸಾಯಂಕಾಲ ಅವರು ಸಮುದ್ರ ತೀರದಲ್ಲಿ ಸುತ್ತಾಡಲು ಹೊರಟರು. ಸೂರ್ಯನು ಅಸ್ತಮಿಸುವ ಸಮಯಕ್ಕೆ ಹೊದೇರಿಯ ಹೆಂಡತಿಯಲ್ಲಿ ಹಿಂದುರೀತಿ ಬದಲಾವಣೆ ಆಯಿತು.

ಇದ್ದಕ್ಕಿದ್ದಂತೆಯೇ ಆಕೆ ಪಂಚವರ್ಣದ ಮೀನಿನಂತೆ ರೂಪಾಂತರ ಹೊಂದಿ ಧೊಪ್ಪನೆ ಸಮುದ್ರದಲ್ಲಿ ಬಿದ್ದು ಕಣ್ಣಿಗೆ ಕಾಣಿಸದಂತೆ ಮುಳುಗಿಹೋದಳು.

ಅಷ್ಟೇ. ಹೊದೇರಿ ಮತ್ತೆ ಆಕೆಯನ್ನು ನೋಡಲೇ ಇಲ್ಲ.






**ಪೂ**ರ್ವಕಾಲದಲ್ಲಿ ಬ್ರಹ್ಮದತ್ತನು ಕಾಶೀ ರಾಜ್ಯವನ್ನು ಪರಿಪಾಲಿಸುತ್ತಿರುವಾಗ ಬೋಧಿಸತ್ವನು ಒಬ್ಬ ಜಮೀನುದಾರನ ಮಗನಾಗಿ ಜನಿಸಿದನು. ಆತನು ದೊಡ್ಡವನಾಗುವ ವೇಳೆಗೆ ಆ ಕುಟುಂಬ ಐಶ್ವರ್ಯದಿಂದ ತುಂಬಿ ತುಳುಕಾಡತಿತ್ತು. ಬೋಧಿಸತ್ವನಿಗೆ ಒಬ್ಬ ಪ್ರೀತಿಯ ತಮ್ಮನಿದ್ದನು.

ಹೀಗಿರಲಾಗಿ ಕೆಲವು ದಿನಗಳಾದಮೇಲೆ ತಂದೆ ಕಾಲವಾದನು. ಅದರಿಂದ ಕುಟುಂಬ ವ್ಯವಹಾರವನ್ನೆಲ್ಲಾ ನೋಡಿಕೊಂಡು ಬರೋಣವೆಂದು ಅಣ್ಣತಮ್ಮಂದಿರಿಬ್ಬರೂ ಅವರ ಆಡಳಿತದಲ್ಲಿದ್ದ ಒಂದು ಹಳ್ಳಿಗೆ ಹೋದರು. ಅಲ್ಲಿ ದವಸಧಾನ್ಯಗಳ ವಸೂಲಿಯಿಂದ ಅವರಿಗೆ ಒಂದುಸಾವಿರ ವರಹಗಳ ನಗದುಹಣ ರೈತರಿಂದ ದೊರೆಯಿತು.

ಈ ನಗದುಹಣವನ್ನು ತೆಗೆದುಕೊಂಡು ಸಹೋದರರಿಬ್ಬರೂ ಮತ್ತೆ ಕಾಶೀನಗರಕ್ಕೆ ಪ್ರಯಾಣಹೊರಟರು. ದಾರಿಯಲ್ಲಿ ಅವರು ಒಂದು ಹೊಳೆಯನ್ನು ದಾಟಬೇಕಾಯಿತು. ದೋಣಿಯವನು ಬರಲು ಇನ್ನೂ ಸಮಯವಿದ್ದುದರಿಂದ, ತಮ್ಮೊಂದಿಗೆ ತಂದುಕೊಂಡ ತಿಂಡಿಯ ಗಂಟನ್ನು ಬಿಚ್ಚಿ ಫಲಾಹಾರ ಮಾಡಿ ನೀರು ಕುಡಿದರು. ಬೋಧಿಸತ್ವನು ತನ್ನ ಭಾಗದ ತಿಂಡಿಯಲ್ಲಿ ತುಸ ಉಳಿಸಿ, ಅಭ್ಯಾಸಬಲದಿಂದ ಹೊಳೆಗೆ ಹಾಕಿದನು.

ಬೋಧಿಸತ್ವನು ಹಾಗೆಸೆದ ತಿಂಡಿಯನ್ನು ಹೊಳೆಯಲ್ಲಿದ್ದ ಜಲಭೂತ ಸ್ವೀಕರಿಸಿತು. ಅದು ಆ ಫಲಾಹಾರವನ್ನು ಸಂತೋಷದಿಂದ ಭುಜಿಸಲು ಅದಕ್ಕೆ ಒಂದುವಿಧವಾದ ದಿವ್ಯಶಕ್ತಿ ಪ್ರಾಪ್ತವಾಯಿತು.

ಆ ಶಕ್ತಿಯಿಂದ ಅದು ಫಲಾಹಾರ ಹಾಕಿದವರನ್ನು ಕುರಿತು ಎಲ್ಲ ಸಂಗತಿ ಸಂದರ್ಭಗಳನ್ನು ತಿಳಿದುಕೊಂಡಿತು. ಈ ರೀತಿ ತನಗೆ ಉಪಕಾರ ಮಾಡಿದವರು ಯಾರೆಂಬುದನ್ನೂ ಸಹ ತಿಳಿದುಕೊಂಡಿತು. ಬೋಧಿಸತ್ವನು ಹಸಿವು ತೀರಿದಕೂಡಲೇ, ನದಿಯ ದಡದಲ್ಲಿದ್ದ ಒಂದುಕಡೆ ಬಟ್ಟೆ ಹರಡಿಕೊಂಡು ಮಲಗಿದ· ಅವನಿಗೆ ನಿದ್ರೆ ಬಂದಿತು. ಆತನ ತಮ್ಮನದು

ಯಚ್. ನಾರಾಯಣರಾವ್




ಕಳ್ಳಬುದ್ಧಿ. ಆ ಸಾವಿರ ವರಹಗಳನ್ನು ಹೇಗಾದರೂ ಅಪಹರಿಸಿ, ಬಚ್ಚಿಡಬೇಕೆಂಬ ದುರ್ಬುದ್ಧಿಯುಂಟಾಯಿತು. ಕೂಡಲೇ ಹಣವಿದ್ದ ಮೂಟೆಯಂತಹದೇ ಮತ್ತೊಂದು ಮೂಟೆಯನ್ನು ಕಲ್ಲುಗಳಿಂದ ತುಂಬಿದ. ಎರಡು ಮೂಟೆಗಳನ್ನೂ ಅಣ್ಣನಿಗೆ ತಿಳಿಯದಂತೆ ಬಚ್ಚಿಟ್ಟನು.

ಅಂಬಿಗನು ಬಂದಕೂಡಲೇ ಬೋಧಿಸತ್ವನು ಎಚ್ಚರಗೊಂಡನು. ಸಹೋದರರಿಬ್ಬರೂ ದೋಣಿ ಹತ್ತಿದರು. ಆ ದೋಣಿ ಸರಿಯಾಗಿ ಹೊಳೆಯ ನಡುವೆ ಬಂದಿತು. ತಾನು ಯೋಚಿಸಿದ್ದ ಯುಕ್ತಿಯಪ್ರಕಾರ ಕಿರಿಯವನು ಎರಡು ಮೂಟೆಗಳಲ್ಲಿ ಒಂದನ್ನು ಹೊಳೆಯಲ್ಲಿ ಬೀಳುವಂತೆ ಮಾಡಿಬಿಟ್ಟನು. ಮಾಡುತ್ತಿದ್ದುದು ಮೋಸಕಾರ್ಯವಾದುದರಿಂದ ಸರಿಯಾಗಿ ನೋಡದೆ ಆತುರದಲ್ಲಿ ಆ ಎರಡು ಮೂಟೆಗಳಲ್ಲಿ ಒಂದನ್ನು ನೀರಿನೊಳಗೆ ಜಾರಬಿಟ್ಟನು. ಆಗ ಆತನ ಕೈ ಗಡಗಡ ನಡುಗುತಿತ್ತು. ಮೂಟೆಯನ್ನು ಜಾರಬಿಟ್ಟು, ಕೂಡಲೇ "ಅಯ್ಯೋ, ಅಣ್ಣಾ, ಹಣದ ಮೂಟೆ ಹೊಳೆಯಲ್ಲಿ ಬಿದ್ದುಹೋಯಿತು" ಎಂದು ಗಲಭೆ ಎಬ್ಬಿಸಿದನು.

ಆಗ ಬೋಧಿಸತ್ವನಾದ ಅಣ್ಣನು "ಹೋಗಲಿಬಿಡು ತಮ್ಮಾ. ನಮ್ಮ ಹಣವಲ್ಲ ಅದು ಎಂದಿಟ್ಟುಕೊಳ್ಳೋಣ. ಅದರಿಂದಲೇ ಅದು ಹೊಳೆಯಲ್ಲಿ ಬಿದ್ದುಹೋಯಿತು. ಅದಕ್ಕಾಗಿ ಚಿಂತಿಸಿ ಲಾಭವಿಲ್ಲ." ಎಂದು ಸಮಾಧಾನ ಮಾಡಿದ.

ಬೋಧಿಸತ್ವನು ಎಸೆದ ಫಲಾಹಾರವನ್ನು ಜಲಭೂತವೊಂದು ಭುಜಿಸಿತೆಂದು ಆಗಲೇ ಹೇಳಿದ್ದೇವೆ. ಆಗ ಅದಕ್ಕೆ ದಿವ್ಯಶಕ್ತಿ ಪ್ರಾಪ್ತವಾಯಿತೆಂದೂಸಹ ಹೇಳಿದೆವು. ಆ ಸಮಯದಿಂದ ಅದು ಬೋಧಿಸತ್ವನಿಗೆ ಯಾವುದಾದರೊಂದು ರೀತಿಯಲ್ಲಿ ಸಹಾಯ ಮಾಡಿ ಋಣ ತೀರಿಸಿಕೊಳ್ಳಬೇಕೆಂದು ಸಮಯಕ್ಕಾಗಿ ಎದುರು ನೋಡುತಿತ್ತು.

ಈಗ ಮೂಟೆ ನೀರಿನಲ್ಲಿ ಬಿದ್ದಕೂಡಲೇ ಅದು ಹಣದ ಗಂಟೆಂದು ಜಲಭೂತಕ್ಕೆ ತಿಳಿಯಿತು. ತಮ್ಮನು ಮಾಡಬಯಸಿದ ದ್ರೋಹವನ್ನೂಸಹ ಅದು ಗ್ರಹಿಸಿತು. ಕೂಡಲೇ ಆ ಜಲಭೂತ ಭಾರಿ ಬಾಯಿಯಿರುವ ಒಂದು

ಮೀನನ್ನು ಕಳುಹಿಸಿ ಆ ಗಂಟನ್ನು ನುಂಗು ವಂತೆ ಆಜ್ಞಾಪಿಸಿತು. ಆ ಮೀನು ಅದೇರೀತಿ ಆ ಗಂಟನ್ನು ನುಂಗಿತು. ಆ ಗಂಟನ್ನು ನುಂಗಿ ದಾಗಲಿಂದ ಆ ಮೀನು ತನ್ನ ಕಣ್ಣು ತಪ್ಪಿಸಿ ಹೋಗದಂತೆ ಜಾಗರೂಕತೆಯಿಂದ ನೋಡು ತಿತ್ತು ಆ ಜಲಭೂತ.

ಒಂದೆರಡು ದಿನಗಳಾದಮೇಲೆ ಬೋಧಿ ಸತ್ವನೂ ಆತನ ತಮ್ಮನೂ ಕಾಶೀನಗರವನ್ನು ಸೇರಿಕೊಂಡರು. ಬೋಧಿಸತ್ವನು ಹಣದ ಮೂಟೆ ಹೊಳೆಯಲ್ಲಿಬಿದ್ದ ಮಾತನ್ನೇ ಮರೆತು ಬಿಟ್ಟನು. ಆತನು ಆಶಾಪಿಶಾಚನಲ್ಲ.

ಮನೆಸೇರಿದ ಕೂಡಲೇ ಕಿರಿಯವನು ಅಣ್ಣ ನನ್ನು ಮೋಸಗೊಳಿಸಿದೆನಲ್ಲಾ ಎಂಬ ಸಂತೋಷದಿಂದ ತನ್ನ ಹತ್ತಿರವಿದ್ದ ಮೂಟೆ ಯನ್ನು ಆತುರದಿಂದ ಬಿಚ್ಚಿನೋಡಿದ. ನೋಡಿ ದರೆ ಏನಿದೆ? ತಾನು ಗಂಟುಕಟ್ಟಿದ ಕಲ್ಲು ಹೊರತು ಮತ್ತೇನೂ ಕಾಣದಾಯಿತು. ತಾನು ಮಾಡಿದ ಅನುಚಿತ ಕಾರ್ಯವನ್ನು ಗ್ರಹಿಸಿದ. ಹೃದಯ ಬರಿದಾಯಿತು. ಅಂದಿನಿಂದ ಕಿರಿ ಯವನು ಕೊರಗಿ ಕೃಶನಾಗುತಲಿದ್ದ. ಅದು ಕಾಲಕ್ರಮೇಣ ಘೋರವ್ಯಾಧಿಯಾಗಿ ಬದ ಲಾಯಿತು. ಹಾಸಿಗೆ ಹಿಡಿದು ಮಲಗಿದ.

ಒಂದುದಿನ ಈರ್ವರು ಬೆಸ್ತರು ಮೀನಿ ಗಾಗಿ ಹೊಳೆಯಲ್ಲಿ ಬಲೆಯನ್ನು ಬೀಸಿದರು. ಜಲಭೂತ ತನ್ನ ಶಕ್ತಿಯಿಂದ ಮೂಟೆಯನ್ನು ನುಂಗಿದ್ದ ಮೀನು ಬಲೆಗೆ ಬೀಳುವಂತೆ ಮಾಡಿತು. ಬೆಸ್ತರು ಆ ಮೀನನ್ನು ಹಿಡಿದು




ನಗರಕ್ಕೆ ತೆಗೆದುಕೊಂಡು ಹೋದರು. "ಇದರ ಬೆಲೆ ಎಷ್ಟು?" ಎಂದು ಅನೇಕರು ಕೇಳಿದರು. "ಸಾವಿರ ವರಹ ಮೇಲೊಂದು ವರಹ" ಎಂದು ಅವರು ಹೇಳುತ್ತಿದ್ದರು.

ಆ ಬೆಸ್ತರನ್ನು ನೋಡಿ ಜನ ಅಪಹಾಸ್ಯ ಮಾಡಲು ಆರಂಭಿದರು. "ಅಬ್ಬಾ, ಈ ಮೀನಿನ ಬೆಲೆ ಸಾವಿರ ವರಹಗಳಂತೆ. ಅಷ್ಟು ಸಾಲದೆ ಕೊಸರಿಗೆ ಒಂದುವರಹಬೇಕಂತೆ. ನಾವು ಎಂದೂ ಕೇಳಿಲ್ಲ, ಕಂಡಿಲ್ಲ" ಎಂದು ಗೇಲಿಮಾಡ ಹತ್ತಿದರು.

ಬೆಸ್ತರು ಆ ಮೀನನ್ನು ನೆಟ್ಟಗೆ ಬೋಧಿ ಸತ್ವನ ಮನೆಗೆ ತೆಗೆದುಕೊಂಡು ಹೋಗಿ ಆತ ನಿಗೆ ಮಾರಲು ಪ್ರಯತ್ನಿಸಿದರು. "ಬೆಲೆ ಎಷ್ಟು?" ಎಂದು ಕೇಳಿದ ಬೋಧಿಸತ್ವ.




"ನಿಮಗಾದರೆ ಒಂದುವರಹ" ಎಂದರು ಬೆಸ್ತರು. "ಎಲ್ಲರಿಗೂ ಎಷ್ಟು ಬೆಲೆ ಹೇಳಿದಿರಿ?" ಎಂದು ಮತ್ತೆ ಕೇಳಿದ ಬೋಧಿಸತ್ವ ಆಶ್ಚರ್ಯದಿಂದ.

"ಉಳಿದವರಿಂದ ಸಾವಿರ ವರಹ ಮತ್ತು ಮೇಲೊಂದು ವರಹ ತೆಗೆದುಕೊಳ್ಳುತ್ತೇವೆ. ಆದರೆ ನಿಮಗೆಮಾತ್ರ ಒಂದೇಒಂದು ವರಹಕ್ಕೆ ಮಾರುವೆವು" ಎಂದರು ಬೆಸ್ತರು. ಕೂಡಲೇ ಬೋಧಿಸತ್ವನು ಒಂದು ವರಹವನ್ನು ಕೊಟ್ಟು ಬೆಸ್ತರಿಂದ ಆ ಮೀನನ್ನು ಪಡೆದನು. ಆತನೂ ಆತನ ಪತ್ನಿಯೂ ಸೇರಿ ಆ ಮೀನನ್ನು ಕೊಯ್ಯಲು ಅವರಿಗೆ ಒಂದು ವಿಚಿತ್ರ ಕಾಣಿಸಿತು. ಆ ಮೀನಿನ ಹೊಟ್ಟೆಯಲ್ಲಿ ಒಂದು ಮೂಟೆ ಯಿದೆ. ಆ ಮೂಟೆ ಬಿಚ್ಚಿ ನೋಡಲು ಸರಿಯಾಗಿ ಒಂದು ಸಾವಿರ ವರಹಗಳಿತ್ತು! ಬೊಧಿಸತ್ವನು ಸೂಕ್ಷ್ಮವಾಗಿ ಪರಿಶೀಲಿಸಿ ನೋಡಲು ತಾವು ಹೊಳೆಯಲ್ಲಿ ಕಳೆದುಕೊಂಡ ಮೂಟೆಯೇ ಅದು ಎಂದು ನಿರ್ಣಯಕ್ಕೆ ಬಂದ.

ಆಗ ಬೋಧಿಸತ್ವನು ಹೆಂಡತಿಗೆ ನಡೆದ ವಿಷಯವನ್ನೆಲ್ಲಾ ಹೇಳಿದ.

"ಈ ವರಹಗಳ ಮೂಟೆ ನಮ್ಮದೇ! ನಾವು ರೈತರಿಂದ ಹಣ ವಸೂಲಿಮಾಡಿ ತರುತ್ತಿರುವಾಗ ಅಕಸ್ಮಾತ್ತಾಗಿ ಹೊಳೆಯಲ್ಲಿ ಬಿದ್ದು ಹೋಯಿತು. ಅದನ್ನು ನುಂಗಿದ ಮೀನು ಈ ಬೆಸ್ತರಿಗೆ ಸಿಕ್ಕಿದೆ. ಈ ಬೆಸ್ತರು ಸಾಮಾನ್ಯರಲ್ಲ. ದಿವ್ಯಜ್ಞಾನವುಳ್ಳವರಂತೆ ತೋರುವುದು. ಏಕೆಂದರೆ ಸಾವಿರ ವರಹಗಳಿರುವ ಮೂಟೆ ಈ ಮೀನಿನ ಹೊಟ್ಟೆಯಲ್ಲಿರುವುದೆಂದೂ, ಅದರ ಒಡೆಯ ನಾನೆಂಬುದೂ ಅವರಿಗೆ ಸ್ಪಷ್ಟವಾಗಿ ತಿಳಿದಿದೆ. ಆದುದರಿಂದಲೇ ಅವರು ಅದರ ಬೆಲೆ 'ಸಾವಿರದ ಮೇಲೊಂದುವರಹ' ಎಂದು ಹೇಳುತ್ತಾ ಬಂದರು. ನನಗೆ ಮಾತ್ರ ಒಂದೇ ವರಹಕ್ಕೆ ಮಾರಲು ಕುತೂಹಲರಾಗಿದ್ದರು. ಅವರು ಹೆಚ್ಚಿಗೆ ಕೇಳಿದ ಒಂದು ವರಹ ಅವರ ಶ್ರಮಕ್ಕೆ ಪ್ರತಿಫಲ ಅಂದರೆ ಬಹುಮಾನ ವೆಂದಾಯಿತು. ಈ ಹಣ ನನ್ನದೆಂದು ಅವರಿಗೆ ಗೊತ್ತಾಗಿತ್ತಾದುದರಿಂದ ನನ್ನ ಒಡವೆಯನ್ನು ನನಗೇಮಾರಿ ತಮ್ಮ ಕೂಲಿ ತೆಗೆದುಕೊಂಡು ಹೋದರು. ಅವರು ಮಾಡಿದ ಕೆಲಸ ಎಷ್ಟು ಸೂಕ್ತವಾಗಿದೆ.

ಆದರೆ ಈ ವಿಾನಿನ ವ್ಯಾಪಾರಮಾಡಿದ ಜನ ಸಾಮಾನ್ಯಕ್ಕೆ ಇದರ ಅಂತರಾರ್ಥವೆಲ್ಲಾ ಹೇಗೆತಾನೇ ಗೊತ್ತಾಗಬೇಕು? ಅದರಿಂದಲೇ ಅವರು ಈ ಬೆಸ್ತರನ್ನು ಗೇಲಿಮಾಡುತ್ತಿದ್ದರು" ಎಂದು ಹೇಳಿ, ಬೆಸ್ತರಿಗೆ ಇಷ್ಟೊಂದು ದಿವ್ಯಶಕ್ತಿ ಹೀಗೆ ಬಂತೆಂದು ಯೋಚಿಸುತ್ತಾ ಕುಳಿತುಕೊಂಡ ಬೋಧಿಸತ್ವ.

ಹಾಗೆ ಯೋಚನೆಯಲ್ಲಿ ಮಗ್ನನಾಗಿದ್ದ ಬೋಧಿಸತ್ವನಿಗೆ ಒಂದು ದಿವ್ಯವಾದ ಧ್ವನಿ ಕೇಳಿಸಿತು: "ಮಹಾನುಭಾವಾ, ನಾನು ಹೊಳೆಯಲ್ಲಿ ವಾಸಿಸುವ ಜಲಭೂತ. ಅಂದು ಹಳ್ಳಿಯಿಂದ ಹಿಂತಿರುಗುತ್ತಾ ನದಿಯದಡದಲ್ಲಿ ನೀವು ಫಲಾಹಾರ ಮಾಡಿ ಉಳಿದುದನ್ನು ಭೂತಪ್ರೀತಿಗಾಗಿ ನೀರಿನಲ್ಲಿ ಎಸೆದಿರಿ. ಜ್ಞಾಪಕವಿರವುದೇ? ಆ ಪ್ರಸಾದವನ್ನು ಭುಜಿಸಿದ ಕೂಡಲೇ ನನಗೆ ಅಪೂರ್ವವಾದ ದಿವ್ಯಶಕ್ತಿ ಬಂತು. ನಿಮ್ಮ ಚರಿತ್ರೆಯನ್ನೆಲ್ಲಾ ತಿಳಿಯಲು ನನ್ನಿಂದ ಸಾಧ್ಯವಾಯಿತು.

ನೀರಿನಲ್ಲಿ ಬಿದ್ದ ನಿಮ್ಮ ಹಣದ ಮೂಟೆಯನ್ನು ವಿಾನಿನಿಂದ ನುಂಗಿಸಿದ್ದು ನಾನೇ! ಬೆಸ್ತರನ್ನು ಪ್ರೋತ್ಸಾಹಗೊಳಿಸಿ, ಆ ವಿಾನನ್ನು ನಿಮ್ಮ ಹತ್ತಿರಕ್ಕೆ ಕಳುಹಿಸಿದುದೂ ನಾನೇ! ನೀವು ನನಗೆ ಪ್ರಸಾದವಿತ್ತ ಕಾರಣ ನಿಮ್ಮ ಹಣವನ್ನು ಜೋಪಾನ ಮಾಡಿ ನಿಮಗೆ ಒಪ್ಪಿಸಿ ನನ್ನ ಋಣ ತೀರಿಸಿಕೊಂಡೆ. ನಿಮ್ಮ ಹಣವನ್ನು ಸ್ವೀಕರಿಸಿ. ಆದರೆ ಇದರಲ್ಲಿ ಒಂದು ಕಿಲುಬುಕಾಸನ್ನೂ ಸಹ ನಿಮ್ಮ ತಮ್ಮನಿಗೆ ಕೊಡಬೇಡಿ." ಎಂದು ಎಚ್ಚರಿಕೆಕೊಟ್ಟು ತಮ್ಮನು ತಲೆಹಾಕಿದ ದ್ರೋಹ ಮತ್ತು ಕಳ್ಳತನವನ್ನೂ ಬಯಲು ಮಾಡಿತು ಭೂತ.

ಜಲಭೂತಮಾಡಿದ ಉಪಕಾರ ಮತ್ತು ಹೇಳಿದ ಹಿತನುಡಿಗೆ ಬೋಧಿಸತ್ವನು ತನ್ನ ಮೆಚ್ಚುಗೆಯನ್ನು ವ್ಯಕ್ತಿಪಡಿಸಿದ. ಆದರೆ ತನ್ನ ಸಹೋದರನ ವಿಷಯದಲ್ಲಿ ಮಾತ್ರ ಅದರ ಮಾತನ್ನು ಪಾಲಿಸಲಿಲ್ಲ. ತಮ್ಮನು ಕಳ್ಳನೆಂದು ತಿಳಿದರೂಸಹ, ಆ ವಿಷಯವನ್ನು ಮನಸ್ಸಿನಲ್ಲಿಟ್ಟುಕೊಳ್ಳಲಿಲ್ಲ. ಸೋದರ ನ್ಯಾಯವನ್ನು ಅನುಸರಿಸಿ, ಕಿರಿಯುವನಿಗೆ ತನ್ನ ಹಣದಲ್ಲಿ ಅರ್ಧಭಾಗವನ್ನು ಕೊಟ್ಟು, ಬೋಧಿಸತ್ವನು ತನ್ನ ಸೋದರಪ್ರೇಮವನ್ನು ವ್ಯಕ್ತಪಡಿಸಿದನು.





# ಪೂಜಾರಿಯ ದ್ರೋಹ

ಧಾರಾನಗರದಲ್ಲಿ ಬಹಳಕಾಲದಹಿಂದೆ ಒಬ್ಬ ಶ್ರೀಮಂತನಿದ್ದನು. ಆತನಿಗೆ ಇಬ್ಬರು ಮಕ್ಕಳು. ಇಬ್ಬರೂ ಸೋಮಾರಿಗಳು. ಅವರ ಸೋಮಾರಿತನ ಕಂಡು ಶ್ರೀಮಂತನಿಗೆ ತುಂಬಾ ವ್ಯಥೆಯಾಗುತಿತ್ತು. ಅವರ ಕೈಗೆ ಹಣ ಕೊಟ್ಟರೆ ದುಂದುಮಾಡಿ ಹಾಳಾಗುವರೆಂದು ಭಾವಿಸಿ, ಅವರಿಗೆ ಒಂದು ಕಾಸೂ ಕೊಡಲಿಲ್ಲ.

ಶ್ರೀಮಂತನಿಗೆ ಇದ್ದಕ್ಕಿದ್ದಂತೆಯೇ ಕಾಹಿಲೆ ಬಂತು. ಆತನಿಗೆ ಆ ಊರಿನ ಶಿವಾಲಯದ ಪೂಜಾರಿಯಲ್ಲಿ ನಂಬಿಕೆ ಬಹಳ. ಆ ಪೂಜಾರಿಗೆ ಹೇಳಿ ಕಳುಹಿಸಿ, ರಹಸ್ಯವಾಗಿ ಒಂದು ಬೀಗದ ಕೈಯನ್ನು ಆತನಿಗೆ ಕೊಟ್ಟು, "ನಿನ್ನ ಹತ್ತಿರ ಜೋಪಾನವಾಗಿಟ್ಟಿರು. ನನ್ನ ಮರಣಾನಂತರ ನನ್ನ ಮಕ್ಕಳಲ್ಲಿ ಯಾರಾದರೂ ಬಂದು ಕೇಳಿದರೆ ಅವರಿಗೆ ಮಾತ್ರವೇ ಕೊಡು" ಎಂದು ಹೇಳಿದ ಧನವಂತ.

ಪೂಜಾರಿಯನ್ನು ಕಳುಹಿಸಿದನಂತರ ತನ್ನ ಪತ್ನಿಯನ್ನು ಕರೆದು ಆಕೆಯ ಕೈಗೆ ಒಂದು ಪತ್ರವನ್ನು ಕೊಟ್ಟನು. "ನಮ್ಮ ಹುಡುಗರು ಸೋಮಾರಿತನ ಬಿಟ್ಟು ಯಾವುದಾದರೂ ಉದ್ಯೋಗದಲ್ಲಿ ಸೇರಿದರೆ ಆಗ ಮಾತ್ರ ಅವರಿಗೆ ಇದನ್ನು ಕೊಡು. ಅದುವರೆವಿಗೂ ಈ ಪತ್ರವನ್ನು ಭದ್ರವಾಗಿ ಕಾಪಾಡಿಕೊಂಡಿರು" ಎಂದು ಆಕೆಗೆ ಹೇಳಿದನು ಆ ಶ್ರೀಮಂತ. ಆ ತರುವಾಯ ಕೆಲವು ದಿನಗಳಲ್ಲೇ ಆತನು ಮರಣ ಹೊಂದಿದನು.

ತಂದೆ ಸತ್ತನಂತರ ಹುಡುಗರಿಬ್ಬರೂ ಹಣವಿಲ್ಲದೆ ಬಹಳ ತಾಪತ್ರಯ ಪಡಬೇಕಾಯಿತು. ಇದನ್ನು ಕಂಡು ತಾಯಿಯ ಕರುಳು ಕಿವಿಚಿದಂತಾಯಿತು. ಆಕೆ ಮರುಕಗೊಂಡು "ನಿಮ್ಮ ತಂದೆ ಒಂದು ಪತ್ರ ನನ್ನಹತ್ತಿರ ಕೊಟ್ಟಿರು. ಯಾವುದಾದರೂ ಉದ್ಯೋಗದಲ್ಲಿ ಸೇರಿಕೊಂಡರೆ ಅದನ್ನು ನಿಮಗೆ ಕೊಡುತ್ತೇನೆ" ಎಂದು ಹೇಳಿದಳು. ಈ ಮಾತನ್ನು ಕೇಳಿ ಅವರಲ್ಲಿ ಆಶೆ ಚಿಗುರಿತು. ಇಬ್ಬರೂ ಸೇರಿಕೊಂಡು ಸಮಾಲೋಚನೆ ನಡೆಸಿದರು. "ತಮ್ಮಾ, ನೀನು ಎರಡು ದಿನ ಯಾರಿಗೂ ಕಾಣಿಸದಂತೆ ಎಲ್ಲಿಗಾದರೂ ಹೊರಟು

ವಿಶ್ವನಾಥ ಬಿ. ಸಾಲಿಯಾನ್

ಹೋಗು. ಆತರುವಾಯ ಕೆಲಸ ಸಿಕ್ಕಿತೆಂದು ಅಮ್ಮನಿಗೆ ಹೇಳು. ಆಕೆ ಆ ಪತ್ರವನ್ನು ನಮಗೆ ಕೊಡುವಳು. ಅದರಲ್ಲಿರುವ ವಿಷಯ ತಿಳಿಯುವ" ಎಂದು ಹಿರಿಯವನು ಸಲಹೆ ಕೊಟ್ಟ.

ಆ ಸಲಹೆಯ ಪ್ರಕಾರವೇ ನಡೆದು ಕಿರಿಯವನು ತಾಯಿಯ ಹತ್ತಿರವಿದ್ದ ಪತ್ರವನ್ನು ಪಡೆದನು. ಅಣ್ಣನಿಗೆ ತಿಳಿಯದಂತೆಯೇ ಅವನು ಅದನ್ನು ಓದಿಕೊಂಡ. ಅದರಲ್ಲಿ "ನನ್ನ ಹಣವನ್ನೆಲ್ಲಾ ನಮ್ಮಮನೆಯ ಈಶಾನ್ಯದಿಕ್ಕಿನಲ್ಲಿರುವ ಆಲದಮರದ ಕೆಳಗೆ ಇರುವ ಪಾಳುಗುಡಿಯಲ್ಲಿ ಹೂತಿಟ್ಟಿರುವೆನು. ಆ ಬೀಗದ ಕೈ ನಮ್ಮೂರಿನ ಶಿವಾಲಯದ ಪೂಜಾರಿಯ ಬಳಿಯಿದೆ. ತೆಗೆದುಕೊಂಡು ಸುಖವಾಗಿ ಬಾಳಿ" ಎಂದು ಬರೆದಿತ್ತು.

ಕೂಡಲೇ ಕಿರಿಯವನು ಅಣ್ಣನಿಗೆ ತಿಳಿಯದಂತೆ ಪೂಜಾರಿಯಹತ್ತಿರ ಹೋಗಿ ಬೀಗದ ಕೈ ತೆಗೆದುಕೊಂಡ. ಕತ್ತಲಾದ ತರುವಾಯ ಗಢಾರಿ ಹಿಡಿದುಕೊಂಡು ಪಾಳುಗುಡಿಯ ಬಳಿ ಸಾರಿದ. ಬಾಗಿಲು ತೆಗೆದು ಪ್ರವೇಶ ಮಾಡಿದನೋ ಇಲ್ಲವೋ ಯಾರೋ ಆತನ ಬೆನ್ನಿನ ಮೇಲೊಂದು ಗುದ್ದು ಕೊಟ್ಟರು. ಅದು ದೆವ್ವವೆಂದು ಹೆದರಿ ಅವನು ಅಲ್ಲಿಂದ ಕಾಲುತೆಗೆದ. ನಿರಾಶೆಯಿಂದ ಬೀಗದ ಕೈಯನ್ನು ಪೂಜಾರಿಗೇ ಹಿಂತಿರುಗಿಸಿದ.

ಏನೂ ಅರಿಯದವನಂತೆ ಮಾರನೆಯದಿನ ತಾಯಿ ಕೊಟ್ಟ ಪತ್ರವನ್ನು ಅಣ್ಣನಿಗೆ ತೋರಿಸಿದ. ಆತನು ಅದನ್ನು ಓದಿ "ತಮ್ಮಾ



ನಾನು ಗುಡಿಯಬಳಿ ಕಾದಿರುವೆನು. ನಾವು ಅಲ್ಲಿಂದ ಹಣ ತರುವಾಗ ಎಚ್ಚರಿಕೆಯಿಂದ ಇರುವುದು ಉತ್ತಮ. ಆದುದರಿಂದ ನಗರಕ್ಕೆ ಹೋಗಿ ಒಂದು ಬಾಕು ತೆಗೆದುಕೊಂಡುಬಾ. ಯಾವುದಕ್ಕಾದರೂ ಉಪಯೋಗವಾಗುವುದು" ಎಂದು ಹೇಳಿ ಕಳುಹಿಸಿದ.

ಆ ತರುವಾಯ ಅಣ್ಣನು ಹೋಗಿ ಪೂಜಾರಿಯ ಹತ್ತಿರದಿಂದ ಬೀಗದಕೈಯನ್ನು ತೆಗೆದುಕೊಂಡ. ಕತ್ತಲಾದನಂತರ ಗುಡಿಯ ಬಾಗಿಲು ತೆಗೆದು ಒಳನುಗ್ಗಲು, ಆತನ ಬೆನ್ನಿನಮೇಲೂ ಗುದ್ದುಬಿತ್ತು. ಅವನೂಸಹ ಪಿಶಾಚಿಯಿರಬೇಕೆಂದು ಭಯಪಟ್ಟು ಹೊರಗೆ ಬಂದು ಒಂದು ಮರದ ಬಳಿ ಕುಳಿತುಕೊಂಡ. ಕೊಂಚ ಸಮಯದ ನಂತರ ಬಾಕು ತೆಗೆದುಕೊಂಡು

ತಮ್ಮನು ಬಂದ. ಈಗ ಅವರಿಗೆ ತುಸ ಧೈರ್ಯ ಬಂತು. ಆದರೂ ದೆವ್ವವಿದೆಯೆಂಬ ಹೆದರಿಕೆ ಮಾತ್ರ ಮನಸ್ಸಿನಲ್ಲೇ ಕೊರೆಯುತಿತ್ತು.

ಅಣ್ಣ ತಮ್ಮಂದಿರಿಬ್ಬರೂ ಸೇರಿ ಗುಡಿಯ ಬಾಗಿಲು ತೆರೆದರು. ಮೆಲ್ಲಗೆ ಒಳಗೆ ಪ್ರವೇಶ ಮಾಡಿದರು. ಈ ಬಾರಿಯೂ ಸಹ ಅವರಿಬ್ಬರ ಬೆನ್ನಿನ ಮೇಲೂ ತಲಾ ಒಂದೊಂದು ಗುದ್ದು ಬಿತ್ತು. ಆಗ ಕಿರಿಯವನು ತನ್ನ ಕೈಯಲ್ಲಿದ್ದ ಚಾಕನ್ನು ಕತ್ತಲೆಯಲ್ಲಿ ಹಿಂದಕ್ಕೆ ಬೀಸಿದನು.

ಕೂಡಲೇ ಯಾರೋ ಕಿಟಾರನೆ ಕಿರಿಚಿ ಓಡಿಹೋಗುತ್ತಿರುವಂತೆ ಶಬ್ದ ಕೇಳಿಸಿತು.

ದೆವ್ವ ಓಡಿಹೋಯಿತೆಂದು ಅವರು ಸಂತೋಷಪಟ್ಟರು. ನಂತರ ಅಗೆಯಲು ಪ್ರಾರಂಭಿಸಿದರು. ಅಲ್ಲಿ ಅವರಿಗೆ ಒಂದು ಪೆಟ್ಟಿಗೆ ಸಿಕ್ಕಿತು. ಅದರಲ್ಲಿ ಧನವಿರುವುದಕ್ಕೆ ಬದಲಾಗಿ ಒಂದು ಪತ್ರ ಮಾತ್ರ ಸಿಕ್ಕಿತು. ಅದನ್ನು ಮನೆಗೆ ತಂದು ನೋಡಿದರು. ಧಾರಾ ನಗರಕ್ಕೆ ಸಮೀಪದಲ್ಲಿ ನೂರು ಎಕರೆ ಜಮೀನು ಕೊಂಡು ಕೊಂಡು ಅವರಿಬ್ಬರ ಹೆಸರಿಗೆ ಬರೆಸಿರುವುದಾಗಿ ಅದರಲ್ಲಿತ್ತು.

ಆ ಪತ್ರವನ್ನು ಅವರು, ತಮ್ಮ ತಂದೆಗೆ ಆಪ್ತನೆಂಬ ಗೌರವದಿಂದ ಪೂಜಾರಿಯ ಮನೆಗೆ ತೆಗೆದುಕೊಂಡು ಹೋಗಿ ಆತನಿಗೆ ತೋರಿಸಿದರು.

ಆ ಸಮಯಕ್ಕೆ ಪೂಜಾರಿ ಕೈಗೆ ಕಟ್ಟು ಕಟ್ಟಿಕೊಂಡಿದ್ದ. ಅದೇನೆಂದು ಆ ಸಹೋದರರು ಕೇಳಲು "ಇದು ನನ್ನ ದ್ರೋಹಕ್ಕೆ ತಕ್ಕ ಶಾಸ್ತಿ" ಎಂದು ಹೇಳಿ, ಅವರು ಗುಡಿಯಲ್ಲಿ ಪ್ರವೇಶಿಸಿದಾಗಲೆಲ್ಲಾ ತಾನೂ ಸಹ ಅವರನ್ನು ಹಿಂಬಾಲಿಸಿ, ಬೆನ್ನಿನ ಮೇಲೆ ಹೊಡೆದು ಭಯಗೊಳಿಸಿದೆನೆಂದು ಹೇಳಿದ. ಅಷ್ಟೇ ಅಲ್ಲ, ಪತ್ರವನ್ನು ಓದಿನೋಡಿ "ತರುಣರೇ, ನಾನೂ ಸಹ ನಿಮ್ಮಂತೆಯೇ ಆ ಗುಡಿಯಲ್ಲಿ ಹಣವಿರಬಹುದೆಂದು ನೆನೆಸಿದ್ದೆನೇ ಹೊರತು ಈ ರೀತಿಯ ಪತ್ರವಿರಬಹುದೆಂದು ಭಾವಿಸಿರಲಿಲ್ಲ. ನಿಮ್ಮ ತಂದೆ ತುಂಬಾ ದೂರ ದೃಷ್ಟಿಯುಳ್ಳವನು" ಎಂದು ಹೇಳಿದ.

ಅವರು ಆಗ ತಮ್ಮ ತಂದೆಯ ಉದ್ದೇಶವನ್ನು ಗ್ರಹಿಸಿದರು. ಆ ಭೂಮಿಯನ್ನು ಸಾಗುವಳಿ ಮಾಡಿಕೊಂಡು ಸುಖವಾಗಿದ್ದರು.






## 9

[ ಚತುರ್ನೇತ್ರನೂ ಸಮರಸೇನನೂ ಮಾತಾಡುತ್ತಿದ್ದಾಗ ಮರೆಯಲ್ಲಿದ್ದು ಕೇಳಿದ ಆಟವಿಕರನ್ನು ನರವಾನರ ಉಲೂಕಗಳು ಬೆಂಬತ್ತಿದುವಲ್ಲವೆ? ಆಮೇಲೆ ಸಮರಸೇನನು ಧನರಾಶಿಯು ನಾವೆ, ಮತ್ತು ನಾಗಕನ್ಯೆಯರ ವೃತ್ತಾಂತವನ್ನು ಕೇಳಿದನು. ಆಗ ಶಮನದ್ವೀಪದ ರಾಜನಲ್ಲಿ ಕಾಳಿಕಾದೇವಿಯ ಕೋರಿಕೆಯ ವಿವರಗಳನ್ನು ಚತುರ್ನೇತ್ರನು ವಿವರಿಸಿದನು. ಹೀಗೆ—]

ಚತುರ್ನೇತ್ರನು ಹೇಳುತ್ತಿದ್ದ ಕಥೆ ಕೇಳಿ ಸಮರಸೇನನಿಗೆ ಬಹಳ ಆಶ್ಚರ್ಯವಾಯಿತು. ಕಾಳಿಕಾದೇವಿ ತನ್ನ ಆಲಯುವನ್ನು ಕಲ್ಲು ಮಣ್ಣುಗಳಿಂದಲ್ಲದೆ ಬೆಳ್ಳಿ ಬಂಗಾರಗಳಿಂದ ನಿರ್ಮಿಸುವಂತೆ ಆಜ್ಞಾಪಿಸಿದುದು ತುಂಬಾ ಸೋಜಿಗವಾಗಿ ಕಂಡುಬಂದಿತು. ದೇವಾಲಯುವನ್ನು ಬೆಳ್ಳಿ ಬಂಗಾರಗಳಿಂದ ನಿರ್ಮಿಸುವುದು ಮಾನವಮಾತ್ರರಿಂದ ಸಾಧ್ಯವೇ?

"ಚತುರ್ನೇತ್ರನೇ, ಕಾಳಿಕಾಂಬೆ ಅಸಾಧ್ಯವಾದ ಈ ಕೆಲಸವನ್ನು ಮಾಡುಲು ತನ್ನ ಭಕ್ತನಿಗೆ ಹೇಳಿದುದು ನನಗೆ ಬಹಳ ಅಚ್ಚರಿಯನ್ನುಂಟುಮಾಡಿದೆ" ಎಂದ ಸಮರಸೇನ. ಚತುರ್ನೇತ್ರನು ತಲೆದೂಗಿ, ಗಹಗಹಿಸಿ ನಕ್ಕನು. "ಸಮರಸೇನನೇ. ನಿನಗೆ ಶಕ್ತಿಯ ಉಪಾಸನೆ ಎಂದರೇನೋ ತಿಳಿಯದು. ಇಹಲೋಕ ಸುಖಗಳನ್ನೂ, ಜೊತೆಯುವರಮೇಲೆ ಅಧಿಕಾರ ಚಲಾಯಿಸುವ ಹಕ್ಕನ್ನೂ ಬಯಸುವವರುಮಾತ್ರ ಇಂತಹ ಶಕ್ತಿಯ ಉಪಾಸಕರಾಗುವರು. ದೇವಿ ಅವರಿಗೆ ಆ ಶಕ್ತಿ ಪ್ರಸಾದಿಸುವ ಮುನ್ನ ಅವರ ಧೈರ್ಯಸಾಹಸಗಳನ್ನಷ್ಟೇ ಅಲ್ಲದೆ ತನ್ನಲ್ಲಿರುವ ಭಕ್ತಿಗೌರವಗಳನ್ನೂ ಸಹ ಪರೀಕ್ಷಿಸುವಳು. ನಮ್ಮ ರಾಜ




ನಾದ ಶಾಕ್ತೇಯನನ್ನೂ ಸಹ ಕಾಳಿಕಾದೇವಿ ಇಂತಹ ಪರೀಕ್ಷೆಗೆ ಗುರಿಮಾಡಿದಳು.

"ಹಾಗಾದರೆ ಆತನು ಅಷ್ಟೊಂದು ಬೆಳ್ಳಿ ಬಂಗಾರಗಳನ್ನು ಸಂಪಾದಿಸಿದನೇ?" ಎಂದು ಕೇಳಿದ ಸಮರಸೇನ. ಅದಕ್ಕೆ ಚತುರ್ನೇತ್ರನು

"ಅದೇ ನಾನು ಹೇಳಲಿರುವ ಕಥೆ. ಧನ ರಾಶಿಯಿಂದ ತುಂಬಿರುವ ನಾವೆ, ಅದನ್ನು ಕಾವಲು ಕಾಯುತ್ತಿರುವ ನಾಗಕನ್ಯೆಯ ವಿಷಯವೆಲ್ಲಾ ಇದರಲ್ಲೇ ಅಡಗಿದೆ. ನಾನೂ ಏಕಾಕ್ಷಿಮಾಂತ್ರಿಕನೂ ಕಡು ವೈರಿಗಳಾಗಲು ಕಾರಣಕೂಡಾ ವಿವರಿಸುವೆನು. ಆ ಶಮನ ದ್ವೀಪದ ಕಾಳಿಕಾದೇವಿ ಕೋರಿದ ಕೋರಿಕೆ ಮತ್ತು ಹಾಗೆಮಾಡಲು ಶಾಕ್ತೇಯನು ಒಪ್ಪಿಕೊಂಡ ವಿಷಯ ಇದಕ್ಕೆ ಮೂಲಕಾರಣವೆಂದು ಹೇಳಬಹುದು. ಮಹಾಭಕ್ತನಾದ ಶಾಕ್ತೇಯನು ದೇವಿಯ ಕೋರಿಕೆಯನ್ನು ನೆರವೇರಿಸಲು ನಿರ್ಧರಿಸಿದನು. ಒಂದು ರೀತಿ ನೋಡಿದರೆ ಅದು ಕೋರಿಕೆ ಎನ್ನುವುದಕ್ಕಿಂತಲೂ ದೇವಿಯ ಆಜ್ಞೆ ಎಂದು ಭಾವಿಸಿದರೆ ಸರಿ ಎಂದು ಕಾಣುತ್ತದೆ. ಶಾಕ್ತೇಯನು ಅಷ್ಟೊಂದು ಬೆಳ್ಳಿ ಬಂಗಾರಗಳನ್ನು ಸಂಪಾದಿಸಲು ನಿಮ್ಮಂತೆಯೇ ಆತನೂಸಹ ಪರರಾಜ್ಯಗಳಮೇಲೆ ಧಾಳಿ ನಡಿಸದೆ ಬೇರೊಂದು ಮಾರ್ಗವೇ ಇರಲಿಲ್ಲ.

"ಶಾಕ್ತೇಯನು ಸೈನಿಕರನ್ನು ಜೊತೆ ಮಾಡಲು ದೇಶದ ನಾಲ್ಕುಮೂಲೆಗಳಲ್ಲೂ ಶೋಧಿಸ ತೊಡಗಿದನು. ಒಳ್ಳೇ ದೇಹ ದಾರ್ಢ್ಯವೂ, ಧೈರ್ಯಸಾಹಸಗಳೂ ಇರುವ ಯುವಕರನ್ನು ಆರಿಸಿ ಸೈನ್ಯಕ್ಕೆ ಸೇರಿಸಿಕೊಳ್ಳಲಾರಂಭಿಸಿದ. ಒಂದು ಗ್ರಾಮಕ್ಕೆ ಹೋಗಿ ಅಲ್ಲಿರುವ ಯುವಕರನ್ನು ಕಲೆಹಾಕಿ ಮಲ್ಲ ಯುದ್ಧ, ಕತ್ತಿ ಮತ್ತು ದೊಣ್ಣೆವರಸೆ ಮುಂತಾದ ಸ್ಪರ್ಧೆಗಳನ್ನೇರ್ಪಡಿಸಿದನು. ಈ ಪಂದ್ಯಾಟಗಳಲ್ಲಿ ಭಾಗವಹಿಸಿ, ಜಯಶಾಲಿಗಳಾದ ಕೆಲ ಯುವಕರನ್ನುಮಾತ್ರ ಸೈನ್ಯಕ್ಕೆ ಸೇರಿಸಿಕೊಳ್ಳುತ್ತಾ ಬಂದನು. ಅವನು ಈ ರೀತಿ ಸೈನ್ಯ ಜಮಾವಣೆ ಮಾಡುವ ಸಮಯದಲ್ಲಿ ನಾನು ಇಪ್ಪತ್ತು ವರ್ಷದ ಯುವಕ.

ಏಕಾಕ್ಷಿಯೂ ಸಹ ನನ್ನ ಓರಗೆಯವನೇ! ಅಷ್ಟೇ ಅಲ್ಲ; ಅದೇ ಹಳ್ಳಿಯಲ್ಲಿರುವವನು. ಏಕಾಕ್ಷಿಗೂ ನನಗೂ ಚಿಕ್ಕಂದಿನಲ್ಲಿ ಆದ



ವಿರೋಧವನ್ನು ಇಲ್ಲಿ ನಿನಗೆ ಹೇಳಲೇಬೇಕು. ನಮ್ಮಿಬ್ಬರಿಗೆ ಬಾಲ್ಯದಲ್ಲಿ ಬೆಳೆದ ಶತ್ರು ಭಾವವೇ ಅನೇಕ ದುಶ್ಚರ್ಯೆಗಳಿಗೆ ದಾರಿ ಮಾಡಿ, ಕೊನೆಗೆ ಈ ದ್ವೀಪವನ್ನು ಮಾನವ ವಾಸ ಯೋಗ್ಯವಲ್ಲದಂತೆ ಮಾಡಿತು. ಏಕಾಕ್ಷಿಯಲ್ಲ! ಈ ಉಲೂಕನಿಂದ ಅವನಿಗೆ ಏಕಾಕ್ಷಿತನ ಪ್ರಾಪ್ತವಾಯಿತು. ಅವನೂ ನಾನೂ ಒಂದೇ ಹಳ್ಳಿಯವರೆಂದು ಹೇಳಿದ್ದೆನಷ್ಟೇ!

ಆ ಹಳ್ಳಿಯಲ್ಲಿ ನಮ್ಮಿಬ್ಬರ ಮನೆಗಳು ಅಕ್ಕಪಕ್ಕದಲ್ಲಿದ್ದುವು. ನಮ್ಮಲ್ಲಿ ಮೊದಲಿನಿಂದಲೂ ಸ್ನೇಹಭಾವಕ್ಕಿಂತಲೂ ಶತ್ರುಭಾವವೇ ಅಧಿಕವಾಗಿತ್ತು. ಆದರೆ ಅದು ಇಷ್ಟು ತೀವ್ರದೆಶೆಗೆ ಬರಲು ಬಹಳಕಾಲ ಬೇಕಾಯಿತು. ನಾನೂ, ಏಕಾಕ್ಷಿಯೂ ನಮ್ಮ ಆರನೇ ವಯಸ್ಸಿನಿಂದ ಜೀವನ ಪ್ರಾರಂಭಿಸಿದೆವು. ನಮ್ಮ ಹಳ್ಳಿಯ ಮುಖ್ಯಸ್ಥನಾದ ಪತಂಗನ ಕುರಿಗಳನ್ನು ಅಟ್ಟಿಕೊಂಡುಹೋಗಿ ಮೇಯಿಸಿಕೊಂಡು ಬರುವುದು ನಮ್ಮ ಕೆಲಸ. ನಾವು ಆಗ ತೀರಾ ಸಣ್ಣವರಾಗಿದ್ದುದರಿಂದ ಬೇಟೆಯಾಡುವಂತಿರಲಿಲ್ಲ. ತರುಣರೂ ದೃಢಕಾಯರೂ ಮಾತ್ರವೇ ಬೇಟೆಗೆ ಹೋಗುತ್ತಿದ್ದರು. ಒಂದುದಿನ ನಾನೂ, ಏಕಾಕ್ಷಿಯೂ ಮತ್ತೆ ಕೆಲ ಹುಡುಗರೂ ಕುರಿಗಳನ್ನು ಅಡವಿಗೆ ಅಟ್ಟಿಕೊಂಡು ಹೋದೆವು. ಆ ಪ್ರದೇಶವೆಲ್ಲಾ ಬಹಳ ದಟ್ಟವಾದ ಮರಗಳಿಂದ ಕಿಕ್ಕಿರಿದು ತುಂಬಿತ್ತು ಅಷ್ಟು ಮಾತ್ರವೇ ಅಲ್ಲ. ಭಾರಿ ಹುಲಿ ಮತ್ತು ಸಿಂಹಗಳಿಗಷ್ಟೇ ಅಲ್ಲದೆ ಬೇರೆ ಕ್ರೂರಮೃಗಗಳ ನಿವಾಸಸ್ಥಾನವಾಗಿತ್ತು.






ಆದರೂ ಕುರಿಗಳನ್ನು ಮೇಯಿಸಲು ಅದಕ್ಕಿಂತಲೂ ಉತ್ತಮವಾದ ಪ್ರದೇಶ ನಮ್ಮ ಹಳ್ಳಿಯ ಸುತ್ತಮುತ್ತ ಇರಲಿಲ್ಲ.

ಕುರಿಗಳನ್ನು ದೂರದಲ್ಲಿ ಬಿಟ್ಟು, ನಾವೆಲ್ಲ ಒಂದು ಮರದಬಳಿ ಕುಳಿತುಕೊಂಡೆವು. ಇದ್ದಕ್ಕಿದ್ದಂತೆ ಒಂದು ಮುದ್ದಾದ ಜಿಂಕೆ ಮರಿ ನನಗೆ ಸಂಬಂಧಿಸಿದ ಕುರಿಗಳ ಹತ್ತಿರ ಬಂದು ಅರಚಲು ಆರಂಭಿಸಿತು. ಬಹುಶಃ ಅದು ತನ್ನ ತಾಯಿಯಿಂದ ಬೇರೆಯಾಗಿ ಇತ್ತ ಕಡೆ ಬಂದಿರಬಹುದು.

"ಆ ಜಿಂಕೆ ಮರಿಯನ್ನು ಕಂಡಕೂಡಲೇ ನನಗೆ ಅದನ್ನು ಹಿಡಿದು ಸಾಕಬೇಕೆಂಬ ಮನಸ್ಸಾಯಿತು. ತಟಕ್ಕನೆದ್ದು ಅಲ್ಲಿಗೆ ಹೋದೆ. ಇಷ್ಟರಲ್ಲಿ ಏಕಾಕ್ಷಿಸಹ ಆ ಜಿಂಕೆಯನ್ನು ನೋಡಿದ.



ಮೊದಲು ನಾನು ನೋಡಿದೆ. ಆ ಜಿಂಕೆ ಮರಿ ನನ್ನದು ಎಂದು ನನ್ನ ಹಿಂದೆಯೇ ಓಡಿಬಂದ.

"ಆದರೆ ನಾನು ಮೊದಲು ಅಲ್ಲಿಗೆ ಧಾವಿಸಿ ಆ ಜಿಂಕೆ ಮರಿಯನ್ನು ಹಿಡಿದುಕೊಂಡೆ. ನನ್ನ ಹತ್ತಿರವಿದ್ದ ಹಗ್ಗವನ್ನು ಅದರ ಕೊರಳಿಗೆ ಕಟ್ಟಿ ಎಳೆದುಕೊಂಡು ಬರಲು ಪ್ರಯತ್ನಿಸುತ್ತಿದ್ದೆ. ಇಷ್ಟರಲ್ಲಿ ಏಕಾಕ್ಷಿ ನನ್ನನ್ನು ಸಮೀಪಿಸಿ 'ಜಿಂಕೆ ಮರಿ ನನ್ನದು' ಎಂದು ಜಗಳಕ್ಕೆ ಬಂದ. ನನಗೆ ಮಿತಿಮೀರಿ ಕೋಪಬಂತು. ಅಲ್ಲೇ ಇದ್ದ ಒಂದು ಬಂಡೆಯನ್ನು ತೆಗೆದು ಆತನ ತಲೆಯಮೇಲೆ ಕುಕ್ಕಿದೆ. ಅವನು ಗೋಳಾಡುತ್ತಾ ಕೆಳಗೆ ಬಿದ್ದುಬಿಟ್ಟ.

"ನಮ್ಮ ಈ ಕಾದಾಟದಲ್ಲಿ ಜಿಂಕೆಮರಿ ಕೊರಳಿಗೆ ಕಟ್ಟಿದ್ದ ಹಗ್ಗದೊಂದಿಗೆ ಪರಾರಿ ಆಯಿತು. ನಾನು ಅದನ್ನು ಹಿಂಬಾಲಿಸಿದೆ. ಮರಗಿಡ, ಪೊದೆಪೊದರುಗಳ ನಡುವೆ ಓಡಿಯೋಡಿ ಅಂತೂ ಅದನ್ನು ಹಿಡಿದೆ. ಆ ವೇಳೆಗೆ ನಾನು ತೀರಾ ಬಳಲಿದ್ದೆ. ಜಿಂಕೆಮರಿ ನನ್ನಿಂದ ತಪ್ಪಿಸಿಕೊಂಡು ಹೋಗಲು ಎಳೆದಾಡುತಿತ್ತು. ನಾನು ನನ್ನ ಹಿಡಿತ ಸಡಿಲವಾಗದಂತಿರಲು ಹೆಣಗಾಡುತ್ತಿದ್ದೆ.

"ಈ ಪರಿಸ್ಥಿತಿಯಲ್ಲಿ ಎದೆಬಿರಿಯುವಂತಹ ಸಿಂಹಗರ್ಜನೆ ಕೇಳಿಸಿತು. ಅದೂ ತುಂಬಾ ಸಮೀಪದಿಂದಲೇ! ನಾನು ಬೆದರಿ, ಜಿಂಕೆ ಮರಿಯನ್ನು ಒಂದು ಮರಕ್ಕೆ ಬಿಗಿದು ಕಟ್ಟಿ ಆ ಮರದಮೇಲೇರಿದೆ. ಕೊಂಬೆಗಳ ನಡುವೆ ಸೇರಿಕೊಂಡೆ. ಅಲ್ಲಿ ನನ್ನ ಮನಸ್ಸು ಕೊಂಚ



ನೆಮ್ಮದಿ ಹೊಂದಿತು. ಆ ನಂತರವೇ ನಾನು ಮಾಡಿದ ತಿಳಿಗೇಡಿತನದ ಅರಿವಾಯಿತು. ಮರಕ್ಕೆ ಕಟ್ಟಿಹಾಕಿದ ಜಿಂಕೆಮರಿ ಕೊರಳಿಗೆ ಬಿಗಿದಿದ್ದ ಹಗ್ಗವನ್ನು ಎಳೆಯುತ್ತಾ, ಕಿರಿಚತೊಡಗಿತು. ಒಂದುವೇಳೆ ಸಿಂಹವು ಎಲ್ಲಾದರೂ ದೂರದಲ್ಲಿ ಹೋಗುತ್ತಿದ್ದರೂ ಆ ಅರಚಾಟ ಕೇಳಿ ಈ ಪ್ರದೇಶಕ್ಕೆ ಬರಬಹುದೆಂಬ ಭಯವುಂಟಾಯಿತು. ಒಂದೆರಡು ನಿಮಿಷಗಳಲ್ಲಿ ಸಿಂಹವು ಅಲ್ಲಿಗೆ ಬಂದೇಬಿಟ್ಟಿತು.

ಮರದ ಕೊಂಬೆಗಳ ನಡುವೆ ಕುಳಿತಿದ್ದ ನನಗೆ ಪ್ರಾಣಭಯವಿರಲಿಲ್ಲ. ಆದರೆ ಕೆಳಗೆ ಕಟ್ಟಿಹಾಕಿದ್ದ ಜಿಂಕೆಮರಿಯ ಮೇಲೆ ಹಾರಿತು ಆ ಸಿಂಹ. ಪ್ರಾಣಭಯದಿಂದ ತಲ್ಲಣಿಸಿ ಅರಚುತ್ತಿದ್ದ ಆ ಜಿಂಕೆಮರಿಯನ್ನು ಕಂಡು ನನ್ನ ಮನಸ್ಸು 'ಅಯ್ಯೋ' ಎಂದೆನಿಸಿತು. ನಾನು ಸುಮ್ಮನಿರಲಾರದೆ ಒಣಗಿದ ಸಣ್ಣದೊಂದು ಕೊಂಬೆಯನ್ನು ಕಿತ್ತು ಸಿಂಹದಮೇಲೆಸೆದೆ. ಅದೊಂದು ಮೂರ್ಖತನ. ಆಗಲೇ ಸಿಂಹವು ತಲೆ ಎತ್ತಿ ನನ್ನಕಡೆ ನೋಡಿತು.

ಸಿಂಹವು ಮೊದಲು ಜಿಂಕೆಯಮರಿಯನ್ನು ಕೊಂದು ತನಗೆ ಬೇಕಾಗುವಷ್ಟು ತಿಂದಿತು. ತಿನ್ನುವಾಗ ಆಗಾಗ ತಲೆ ಎತ್ತಿ ನನ್ನ ಕಡೆ ನೋಡಹತ್ತಿತು. ಕೊನೆಗೆ ಮರದಮೇಲಿದ್ದ ನನ್ನನ್ನು ಹಿಡಿಯಬೇಕೆಂದು ಮರದಮೇಲಕ್ಕೆ ನೆಗೆಯಿತು. ಆದರೆ ನಾನು ಅದಕ್ಕೆ ಸಿಕ್ಕದಂತೆ ಮತ್ತಷ್ಟು ಮೇಲಕ್ಕೆ ಹತ್ತಿದೆ. ಆದರೂ ಸಿಂಹ ತನ್ನ ಪ್ರಯತ್ನವನ್ನು ಬಿಡಲಿಲ್ಲ. ಕತ್ತಲಾದರೂ





ಅದು ಮರದ ಕೆಳಗೇ ಕಾವಲು ಕಾದಿದ್ದಿತು! ಆ ರಾತ್ರಿಯೆಲ್ಲಾ ನನಗೆ ನಿದ್ದೆ ಬರಲೇ ಇಲ್ಲ.

ಬೆಳ್ಳಂಬೆಳಗಾದಮೇಲೂ ಮರದಿಂದ ಕೆಳಕ್ಕೆ ಇಳಿಯಲು ಹೆದರಿಕೆ. ಸಿಂಹವು ಮರದಡಿಯಲ್ಲಿ ಇಲ್ಲದಿದ್ದರೂ ಸಹ ಆ ಪ್ರದೇಶದಲ್ಲಿರಬಹುದೆಂದು ಊಹಿಸಿದ್ದೆ. ಆಗಾಗ ಅದರ ಭಯಂಕರವಾದ ಗರ್ಜನೆ ಕೇಳಿಬರುತಿತ್ತು.

ಅಂದು ಮಧ್ಯಾಹ್ನದವೇಳೆಗೆ ನನ್ನ ಕಿವಿಗಳು ಕಿವಿಡಾಗುವಂತೆ ತಮಟೆಗಳ ಶಬ್ದ ಕೇಳಿಸಿತು. ಅದು ನಮ್ಮ ಹಳ್ಳಿಯವರು ನನ್ನನ್ನು ಹುಡುಕಲು ಹೊರಟರೆಂಬುದಕ್ಕೆ ಸೂಚನೆ! ನನ್ನ ಜೊತೆ ಕುರಿ ಕಾಯುವವರು ನಾನು ಅಡವಿಯಿಂದ ಹಿಂತಿರುಗಲಿಲ್ಲವೆಂದು ಹಳ್ಳಿಯಲ್ಲಿ ತಿಳಿಸಿರಬಹುದು. ತಮಟೆಗಳ ಸದ್ದು ಕ್ರಮೇಣ ಸಮೀಪಿಸ ಹತ್ತಿತು. ಮರದಿಂದ ಇಳಿದು ಅವರನ್ನು ಎದುರುಗೊಳ್ಳಬೇಕೆಂಬ ಮನಸ್ಸಾಯಿತಾದರೂ ನನಗೆ ಧೈರ್ಯ ಬರಲಿಲ್ಲ. ಆ ಸಿಂಹವು ಅಲ್ಲೇ ಎಲ್ಲಿಯಾದರೂ ಕಾದು ಕುಳಿತಿರಬಹುದೆಂಬ ಅನುಮಾನ ನನ್ನಲ್ಲಿ ಬೇರೂರಿತ್ತು. ಭಲ್ಲೆ, ಈಟಿಗಳನ್ನು ಧರಿಸಿದ ನಲವತ್ತು ಐವತ್ತು ಜನ ನಮ್ಮ ಹಳ್ಳಿಯವರು ಅಡವಿಯೆಲ್ಲಾ ಪ್ರತಿಧ್ವನಿಸುವಂತೆ ಗಲಭೆಮಾಡುತ್ತಾ ಅರಚುತ್ತಾ ಬರುತ್ತಿದ್ದರು. ಕೆಲವರು ತಮಟೆಗಳನ್ನು ಬಾರಿಸುತ್ತಿರುವರು. ನಾನು ಹತ್ತಿ ಕುಳಿತಿದ್ದ ಮರಕ್ಕೂ, ಅವರು ಬಂದಿದ್ದ ಸ್ಥಳಕ್ಕೂ ಸುಮಾರು ಐವತ್ತು ಗಜ ದೂರವಿರಬಹುದು.



"ಸಿಂಹವನ್ನು ಕುರಿತು ನಾನು ಊಹಿಸಿದ್ದು ಸತ್ಯವಾಯಿತು. ಪೊದೆಗಳ ನಡುವೆ ಅವಿತಿಟ್ಟುಕೊಂಡಿದ್ದ ಸಿಂಹ ಹಠಾತ್ತನೆ ಅವರಮೇಲೆ ನೆಗೆಯಿತು. ಇಂತಹ ಸಂಭವ ಬರಬಹುದೆಂದು ನಮ್ಮ ಹಳ್ಳಿಯವರೂ ಸಹ ಎಚ್ಚರಿಕೆಯಿಂದಲೇ ಬರುತ್ತಿದ್ದರು. ದೃಢಕಾಯನಾದ ಯುವಕನೊಬ್ಬನು ಸಿಂಹದ ಪಂಜಾ ಏಟನ್ನು ತನ್ನ ಕೈಯಲ್ಲಿದ್ದ ಗುರಾಣಿಯನ್ನು ಅಡ್ಡವಿಟ್ಟು ತಪ್ಪಿಸಿಕೊಂಡ. ಅದೇ ಸಮಯಕ್ಕೆ ಮತ್ತೊಬ್ಬ ಯುವಕ ಹಿಂದಿನಿಂದ ಬಂದು ಅದರ ಬಾಲವನ್ನು ಬಲವಾಗಿ ಹಿಡಿದುಕೊಂಡ. ಸಿಂಹವು ಆರ್ಭಟಿಸುತ್ತಾ ಹಿಂದಕ್ಕೆ ತಿರುಗಲು ಪ್ರಯತ್ನಿಸುತ್ತಿತ್ತು. ಇಷ್ಟರಲ್ಲಿ ಮೊದಲನೇ ಯುವಕನು ತನ್ನ ಕೈಯಲ್ಲಿದ್ದ ಭಲ್ಲೆಯಿಂದ ಅದರ



ಕೊರಳಮೇಲೆ ಬಲವಾಗಿ ತಿವಿದ. ಏಟುತಿಂದ ಸಿಂಹವು ಅರಚುತ್ತಾ ಮತ್ತೆ ಮುಂದಕ್ಕೆ ನುಗ್ಗಲು, ಬಾಲ ಹಿಡಿದಿದ್ದ ಯುವಕನು ತನ್ನ ಹತ್ತಿರವಿದ್ದ ಬಾಕುವಿನಿಂದ ಅದರ ಬೆನ್ನಿನ ಮೇಲೆ ಬಲವಾಗಿ ತಿವಿದ. ಸಿಂಹಕ್ಕೆ ತುಂಬಾ ಗಾಯವಾಯಿತು. ಯುವಕರಿಬ್ಬರೂ ಸೇರಿ ಅದನ್ನು ತಮ್ಮಹತ್ತಿರವಿದ್ದ ಆಯುಧಗಳಿಂದ ತಿವಿಯಲು ಆರಂಭಿಸಿದರು. ಸಿಂಹವು ನೆಲಕ್ಕೆ ಕುಸಿದುಬಿತ್ತು.

ಮರದ ಕೊಂಬೆಯ ಮೇಲಿಂದ ಇದೆಲ್ಲ ವನ್ನೂ ನೋಡುತ್ತಿದ್ದ ನನಗೆ ಹಿಡಿಸಲಾರ ದಷ್ಟು ಆನಂದವಾಯಿತು. ಗಬಗಬನೆ ಮರ ದಿಂದ ಇಳಿಯುತ್ತಾ ಸಂತೋಷಾತಿಶಯದಿಂದ ಒಂದುಸಾರಿ ಕೂಗಿದೆ.

ಆ ಕ್ಷಣದಲ್ಲಿ ನಡೆದ ವಿಸ್ಮಯವನ್ನು ನಾನು ಕಣ್ಣಾರೆ ನೋಡಿದರೂ ನಾನೇ ನಂಬಲಿಲ್ಲ ವೆಂದರೆ, ಪ್ರಪಂಚದಲ್ಲಿ ಮತ್ತೆ ಯಾರೂ ನಂಬುವಂತಿಲ್ಲ. ನಾನು ಹಾಗೆ ಕಿರಿಚಲು ಆಶ್ಚರ್ಯದಿಂದ ಎಲ್ಲರದೃಷ್ಟಿಯೂ ಒಂದೇ ಸಾರಿ ನನ್ನ ಕಡೆ ಕೇಂದ್ರಿಕೃತವಾಯಿತು.

"ಮರುಕ್ಷಣವೇ ತಮಟೆ ಬಡಿಯುತ್ತಿದ್ದ ಏಕಾಕ್ಷಿ 'ದೆವ್ವ ದೆವ್ವ' ಎಂದು ಕೂಗುತ್ತಾ ಅಲ್ಲಿಂದ ಪಲಾಯನ ಮಾಡಿದ. ಕಣ್ಣುಮುಚ್ಚಿ ತೆರೆಯುವಷ್ಟರಲ್ಲಿ ಆ ಜನವೆಲ್ಲಾ 'ದೆವ್ವ, ದೆವ್ವ' ಎಂದು ವಿಕಾರವಾಗಿ ಕೂಗುತ್ತಾ ಅಲ್ಲಿಂದ ಹಳ್ಳಿಯಕಡೆ ಓಟಕಿತ್ತರು."

"ಇದು ತುಂಬಾ ವಿಚಿತ್ರವಾಗಿದೆ. ನಿನ್ನನ್ನು ಕಂಡು ಹಿರಿಯರೂ ಸಹ ದೆವ್ವವೆಂದು ಭಾವಿಸಿ ಏಕೆ ಓಡಿದರೋ ನನಗೆ ಅರ್ಥವಾಗುತ್ತಿಲ್ಲ" ಎಂದ ಸಮರಸೇನ.

"ಇದೆಲ್ಲಾ ಏಕಾಕ್ಷಿ ಮಾಡಿದ ಮೋಸ. ಅಷ್ಟು ಕಿರಿವಯಸ್ಸಿನಲ್ಲೇ ಆತನೆಷ್ಟು ಕಲುಷಿತ ಹೃದಯದವನೆಂದು ಈ ಒಂದು ಸಂಘಟನೆ ಸೂಚಿಸುವುದು. ನಮ್ಮ ಹಳ್ಳಿಯ ಹಿರಿಯ ಕಿರಿಯರೆಲ್ಲಾ ನಾನು ದೆವ್ವವೆಂದು ನಂಬುವಂತೆ ಮಾಡಿದ ಆ ಮೋಸಗಾರ. ತರುವಾಯ ಹತ್ತು ವರ್ಷಗಳಷ್ಟು ದೀರ್ಘಕಾಲ ನಾನು ದೆವ್ವವಾಗಿ ಅಡವಿಯಲ್ಲೇ ಜೀವಿಸಿಕೊಂಡಿರ ಬೇಕಾದ ಅವಸ್ಥೆಯೊದಗಿತು."

—[ ಇನ್ನೂ ಇದೆ ]






ಸಾವಿರಾರು ವರ್ಷಗಳ ಹಿಂದೆ ಗಂಗಾನದಿ ತೀರದಲ್ಲಿದ್ದ ರಾಮನಗರಕ್ಕೆ ಒಬ್ಬ ರಾಜನಿದ್ದನು. ಆತನಿಗೆ ಇಬ್ಬರು ಕುವರಿಯರೂ ಒಬ್ಬ ಕುಮಾರನೂ ಇದ್ದರು. ಆತನ ಮಂತ್ರಿ ವಕ್ರಬುದ್ಧಿ ರಾಜ್ಯಕಾಂಕ್ಷೆಯಿಂದ ಒಂದು ದಿನ ರಾಜನನ್ನು ತನ್ನ ನೌಕರನಿಂದ ಕೊಲೆಮಾಡಿಸಿ, ರಾಜಕುವರಿಯರನ್ನು ಕೊಲ್ಲಿಸಿದನು. ಐದುವರ್ಷದ ರಾಜಕುಮಾರನಾದ ಪ್ರಮುದನನ್ನುಸಹ ಕೊಲ್ಲಿಸಲು ಪ್ರಯತ್ನಮಾಡಿದನು.

ಆದರೆ, ರಾತ್ರಿ ಕತ್ತಲೆ ಕೋಣೆಯನ್ನು ಪ್ರವೇಶಿಸಿದ ಕೊಲೆಗಡುಕರು ಒಂದು ಮೂಲೆಯಲ್ಲಿ ನಿದ್ದೆಮಾಡುತ್ತಿದ್ದ ಪ್ರಮುದನನ್ನು ಕಂಡು ಬೆದರಿದರು. ಏಕೆಂದರೆ ಆ ಮಗು ದೇದೀಪ್ಯಮಾನವಾಗಿತ್ತು. "ಆ ಮಗುವನ್ನು ಕೊಲ್ಲಲು ನಮ್ಮಿಂದಾಗದು" ಎಂದು ಹಂತಕರು ತಪ್ಪಿಸಿಕೊಂಡರು.

ವಕ್ರಬುದ್ಧಿಗೆ ಏನೂ ತೋರಲಿಲ್ಲ. ಆತನು ಸುಮಿತ್ರನೆಂಬ ಬೆಸ್ತರವನನ್ನು ಕರೆದು "ಎಲವೋ, ನಾನು ಹೇಳಿದಂತೆ ಮಾಡಿದರೆ ನಿನಗೆ ಯಥೇಚ್ಛವಾಗಿ ಹಣ ಕೊಡುವೆನು. ಇಲ್ಲದಿದ್ದರೆ ತಲೆ ತೆಗೆಯಿಸುವೆನು" ಎಂದ.

ತೀರಾ ಬಡವನಾದ ಸುಮಿತ್ರನು ವಕ್ರಬುದ್ಧಿ ಹೇಳಿದಂತೆ ಮಾಡಲು ಸಮ್ಮತಿಸಿದನು. ವಕ್ರಬುದ್ಧಿ ರಾಜಕುಮಾರನಾದ ಪ್ರಮುದನನ್ನು ಬಟ್ಟೆಯಲ್ಲಿ ಸುತ್ತಿ ಒಂದು ಮೂಟೆಯಂತೆ ಕಟ್ಟಿಸಿದ್ದ. ಸುಮಿತ್ರನನ್ನು ಕತ್ತಲೆ ಕೋಣೆಗೆ ಕರೆದುಕೊಂಡು ಹೋಗಿ "ಈ ಮೂಟೆಯನ್ನು ನಿನ್ನ ದೋಣಿಯಲ್ಲಿ ತೆಗೆದುಕೊಂಡು ಹೋಗಿ, ಇದಕ್ಕೆ ಭಾರವಾದ ಕಲ್ಲೊಂದನ್ನು ಬಿಗಿದುಕಟ್ಟಿ, ಅರ್ಧರಾತ್ರಿವೇಳೆ ಕಾಶಿಕಡೆ ಹರಿಯುವ ಗಂಗೆಯಲ್ಲಿ ಬಿಟ್ಟು ಬರಬೇಕು. ಹೋಗು" ಎಂದ ವಕ್ರಬುದ್ಧಿ. ಸುಮಿತ್ರನು ಮೂಟೆಯನ್ನು ಎತ್ತಿದ ಕೂಡಲೇ ಅದರಲ್ಲಿ ಯಾರೋ ಇರುವಂತೆ ಗ್ರಹಿಸಿದ. ಆದರೆ ಆತನು ಮರುಮಾತನಾಡದೆ ಆ ಮೂಟೆಯನ್ನು ತನ್ನ ಮನೆಗೆ ಹೊತ್ತುಕೊಂಡು ಹೋದ. ಮನೆಯಲ್ಲಿ ಆ ಮೂಟೆಯನ್ನು ಬಿಚ್ಚಿ ನೋಡಲು ದೇದೀಪ್ಯಮಾನ

ಎಚ್. ಶಾರದಮ್ಮ




ವಾಗಿ ಬೆಳಗುತಿದ್ದ ಹುಡುಗನು ಕಾಣಿಸಿದ. ಸುಮಿತ್ರನಿಗೆ ಮಕ್ಕಳಿರಲಿಲ್ಲ. ಆತನ ಹೆಂಡತಿ ಮಗುವನ್ನು ಕಂಡಕೂಡಲೇ ಸಂತೋಷಾತಿಶಯದಿಂದ ಮುದ್ದಾಡಿದಳು. ತನ್ನ ಗಂಡನೊಂದಿಗೆ "ನಾವು ಈ ಮಗುವನ್ನು ಸಾಕಿಕೊಳ್ಳೋಣ" ಎಂದಳು.

ಸುಮಿತ್ರನು ಮರುಮಾತನಾಡದೆ ಪ್ರಮುದನನ್ನು ತನ್ನ ಜೋಪಡಿಯಲ್ಲಿ ಬಚ್ಚಿಟ್ಟನು. ಹಳೇ ಬಟ್ಟೆಗಳನ್ನು ಮೂಟೆಕಟ್ಟಿ, ಅದಕ್ಕೆ ಭಾರಿ ಕಲ್ಲೊಂದನ್ನು ಬಿಗಿದು, ತನ್ನ ದೋಣಿಯಲ್ಲಿಟ್ಟುಕೊಂಡು ಗಂಗಾನದಿಯ ಮೇಲೆ ಪ್ರಯಾಣ ಬೆಳೆಸಿದ. ಕೆಲವು ದಿನಗಳಲ್ಲಿ ಕಾಶಿನಗರದಭಿಮುಖವಾಗಿ ಹೋಗಿ, ನದಿ ಮಧ್ಯೆ ಆ ಮೂಟೆಯನ್ನು ಎಸೆದನು. ಇದೆಲ್ಲವನ್ನೂ ರಹಸ್ಯವಾಗಿ ನೋಡುತ್ತಿದ್ದ ವಕ್ರಬುದ್ಧಿಯ ಗೂಢಚಾರರು ಕಾರ್ಯ ಪೂರ್ತಿಯಾಯಿತೆಂದು ಯಜಮಾನನೊಂದಿಗೆ ಹೇಳಿದರು.

ಕೆಲವು ದಿನಗಳು ಸಂದವು. ಸುಮಿತ್ರನಿಗೆ ವಕ್ರಬುದ್ಧಿ ಹಣವನ್ನು ಕೊಡಲಿಲ್ಲ. ಪ್ರಮುದನ ರಹಸ್ಯ ಎಲ್ಲಿ ಹೊರಬೀಳುವುದೋ ಎಂದು ಸುಮಿತ್ರನಿಗೂ ಭಯ. ಆದುದರಿಂದ ಆತನು ಒಂದು ರಾತ್ರಿ ತನ್ನ ಹೆಂಡತಿ ಮತ್ತು ಪ್ರಮುದನೊಂದಿಗೆ ರಾಮನಗರವನ್ನು ತ್ಯಜಿಸಿದನು.

ಕೆಲವಾರು ತಿಂಗಳು ಬೆಟ್ಟಗುಡ್ಡಗಳಲ್ಲಿ, ಅಡವಿಗಳಲ್ಲಿ ಅಲೆದಾಡಿ ಸುಮಿತ್ರನು ಮಥುರಾನಗರವನ್ನು ಸೇರಿಕೊಂಡನು. ಅಲ್ಲಿ ಪ್ರಮುದನ ಹೆಸರನ್ನು ಕುಮುದನೆಂದು ಬದಲಾಯಿಸಿದನು. ಸುಮಿತ್ರನು ತನ್ನ ಹೆಂಡತಿ ಮಕ್ಕಳೊಂದಿಗೆ ಬೇಸಾಯ ಮಾಡಿಕೊಂಡು ಕಾಲಹರಣ ಮಾಡುತ್ತಿದ್ದನು. ದಿನ ಕಳೆದಂತೆ ಕುಮುದನು ದೃಢಕಾಯನಾಗಿಯೂ, ಆಜಾನುಬಾಹುವಾಗಿಯೂ ಬೆಳೆದನು. ಭಾರತದ ಬಲ ಭೀಮನಂತೆ ಕುಮುದನು ಮಲ್ಲಯುದ್ಧ ಮಾಡುವುದರಲ್ಲೂ, ರುಚಿರುಚಿಯಾದ ಅಡಿಗೆ ಮಾಡುವುದರಲ್ಲೂ ಪ್ರವೀಣನಾದ.

ಮಥುರಾ ನಗರಕ್ಕೆ ರಾಜನಿರಲಿಲ್ಲ. ರಾಜಕುಮಾರಿಗೆ ಗಜವರ್ಮನೆಂಬ ರಾಜಬಂಧು ರಕ್ಷಕನಾಗಿದ್ದುಕೊಂಡು ರಾಜಕಾರ್ಯವನ್ನು ನಿರ್ವಹಿಸುತ್ತಿದ್ದನು. ರಾಜಕುಮಾರಿಗೆ ಯುಕ್ತ ವಯಸ್ಸು ಬಂದು ಆಕೆಗೆ ವಿವಾಹವಾದ ಕೂಡಲೇ ಆಕೆಯ ಪತಿ ಮಥುರಾಧಿಪತಿಯಾಗ



ಬೇಕೆಂದು ಮಥುರೆಯ ರಾಜನು ಸಾಯುವ ಮುನ್ನ ಶಾಸನ ಮಾಡಿದ್ದನು. ರಾಜಕುಮಾರಿ ಗುಣವತಿಗೆ ಯುಕ್ತವಯಸ್ಸು ಪ್ರಾಪ್ತವಾದರೂ ಸಹ ಇನ್ನೂ ವಿವಾಹವಾಗಿರಲಿಲ್ಲ.

ಗಜವರ್ಮನಿಗೆ ವಿನೋದ ತಮಾಷೆಗಳೆಂದರೆ ತುಂಬಾ ಮೋಜು. ಒಂದುದಿನ ಆತನು ಅರಮನೆಯಲ್ಲಿ ಮಲ್ಲಯುದ್ಧವನ್ನು ಏರ್ಪಡಿಸಿದ. ರಾಜ್ಯದಲ್ಲಿದ್ದ ಪ್ರತಿ ಮಲ್ಲನನ್ನೂ ಆಹ್ವಾನಿಸಲಾಯಿತು. ನೂರಾರು ಜಟ್ಟಿಗಳು ಬಂದರು. ಅನೇಕಸಾವಿರ ಪ್ರಜೆಗಳು ಜಟ್ಟಿಗಳ ಪಂದ್ಯ ನೋಡಲು ಬಂದರು. ಹಾಗೆ ಬಂದವರಲ್ಲಿ ಕುಮುದನೂ ಒಬ್ಬ. ಸಾಯಂಕಾಲದವರೆವಿಗೂ ಮಲ್ಲಯುದ್ಧಗಳು ನಡೆದವು. ಎಲ್ಲರನ್ನು ಸೋಲಿಸಿದ ಗಜಮಲ್ಲನಿಗೆ ಸನ್ಮಾನ ಮಾಡುವ ಮೊದಲು "ಈ ಜಟ್ಟಿಯನ್ನು ಸೋಲಿಸುವವರು ಯಾರಾದರೂ ಇದ್ದರೆ ಈ ಬಹುಮಾನ ಅವರಿಗೆ ಕೊಡುವೆವು" ಎಂದ.

ಆ ಮಾತು ಕೇಳಿದಕೂಡಲೇ ಜನಸಮುದಾಯದಿಂದ ಕುಮುದನು ಮುಂದಕ್ಕೆ ಬಂದನು. ಗಜಮಲ್ಲನಿಗೂ ಕುಮುದನಿಗೂ ಮಲ್ಲಯುದ್ಧ ನಡೆಯಿತು. ಕುಮುದನು ಕ್ಷಣಮಾತ್ರದಲ್ಲಿ ಸೋಲುವನೆಂದು ನೆನೆಸಿದ್ದರು ಕಿಕ್ಕಿರಿದಿದ್ದ ಜನ. ಗಜವರ್ಮನ ಪಕ್ಕದಲ್ಲಿದ್ದ ಕುರ್ಚಿಯಮೇಲೆ ಕುಳಿತು ಮಲ್ಲಯುದ್ಧವನ್ನು ನೋಡುತಿದ್ದ ರಾಜಕುಮಾರಿಯ ದೃಷ್ಟಿಯೆಲ್ಲಾ ಕುಮುದನಲ್ಲಿ ಕೇಂದ್ರೀಕರಿಸಿತ್ತು. ಆತನು ಗೆಲ್ಲಬೇಕೆಂದು ಆಕೆಯ ಅಪೇಕ್ಷೆ.

ಬಹಳ ಹೊತ್ತು ಭೀಕರ ಕದನವಾದನಂತರ ಕುಮುದನು ಗಜಮಲ್ಲನನ್ನು ಸೋಲಿಸಿದನು. ಗಜವರ್ಮನು ಕುಮುದನಿಗೆ ಬಹುಮಾನ ಕೊಡುತ್ತಾ "ಯುವಕನೇ, ನನ್ನ ರಾಜ್ಯದಲ್ಲಿ ಇಷ್ಟು ಬಲಶಾಲಿಯೊಬ್ಬ ನಿರುವ ವಿಷಯ ನನಗೇ ತಿಳಿಯದು. ನೀನು ಮೊದಲೇ ಏಕೆ ಬರಲಿಲ್ಲ?" ಎಂದ.

ಅದಕ್ಕೆ ಕುಮುದನು "ಪ್ರಭೂ, ನಾನು ವೃತ್ತಿಯಿಂದ ಜಟ್ಟಿಯಲ್ಲ. ನನ್ನ ಕಸಬು ಅಡಿಗೆಮಾಡುವುದು" ಎಂದ.

ಕುಮುದನನ್ನು ಎವೆಯಿಕ್ಕದೆ ಗುಣವತಿ ನೋಡುತ್ತಿರುವುದನ್ನು ಕಂಡು ಗಜವರ್ಮನಿಗೆ ಒಂದು ದುರ್ಬುದ್ಧಿ ಹುಟ್ಟಿತು. ರಾಜಕುಮಾರಿಯನ್ನು ಆ ಅಡಿಗೆಯವನಿಗೆ ಕೊಟ್ಟು



ವಿವಾಹ ಮಾಡಿದರೆ ಶಾಶ್ವತವಾಗಿ ತಾನೇ ರಾಜನಾಗಿರಬಹುದು. ಏಕೆಂದರೆ ಅಡಿಗೆಯ:ವನಿಗೆ ರಾಜಾರ್ಹತೆಯಿಲ್ಲ.

ಹೀಗೆಂದು ಯೋಚಿಸಿ ಮದುವೆಯ ಏರ್ಪಾಟುಗಳನ್ನೆಲ್ಲಾ ರಹಸ್ಯವಾಗಿ ನಡೆಸಿದನು. ಒಂದುದಿನ ರಾತ್ರಿ ಗಜವರ್ಮನು ಕುಮುದನನ್ನು ಕರೆಯಿಸಿ, ಮದುಮಗನನ್ನಾಗಿ ಮಾಡಿದನು. ಗುಣವತಿಯೂ ಅಭ್ಯಂತರ ಹೇಳಲಿಲ್ಲ. ಪುರೋಹಿತರು ಬೆಳಗಾಗುವಷ್ಟರಲ್ಲಿ ವಿವಾಹವನ್ನು ಪೂರೈಸಿದರು.

ಕುಮುದ ಮತ್ತು ಗುಣವತಿಯರಿಗೆ ಅಂತಃಪುರದಲ್ಲೇ ನಿವಾಸವೇರ್ಪಡಿಸಲಾಯಿತು. ತನ್ನ ಹೆಂಡತಿ ಒಬ್ಬಳೇ ಕಾಣಿಸಿದಾಗ ಕುಮುದನು ಆಕೆಯೊಂದಿಗೆ "ರಾಜಕುಮಾರಿ, ಅಡಿಗೆಯವನನ್ನು ಮದುವೆಯಾದೆನೆಂದು ಚಿಂತಿಸಬೇಡ. ನಾನು ರಾಮನಗರದ ರಾಜಕುಮಾರ. ನಮ್ಮ ಮಂತ್ರಿ ವಕ್ರಬುದ್ಧಿ ನಮ್ಮ ವಂಶಕ್ಕೆ ದ್ರೋಹವನ್ನು ಬಗೆದ. ನಿನ್ನ ರಕ್ಷಕನಾದ ಗಜವರ್ಮನೂ ಸಹ ನಿನಗೆ ದ್ರೋಹ ಮಾಡಲು ಪ್ರಯತ್ನಿಸಿದ್ದಾನೆ. ಈರ್ವರಿಗೂ ಉಚಿತ ಶಿಕ್ಷೆಯನ್ನು ಕೊಡುತ್ತೇನೆ" ಎಂದ.

ಗುಣವತಿ ಈ ಮಾತುಗಳನ್ನು ಕೇಳಿ ಆಶ್ಚರ್ಯವನ್ನೇನೂ ವ್ಯಕ್ತಪಡಿಸಲಿಲ್ಲ. ಆಕೆ ಹೀಗೆಂದಳು: "ಪ್ರಪಂಚದಲ್ಲಿ ರಾಜಕುಮಾರರೆಷ್ಟು ಜನರಿಲ್ಲ. ಆದರೆ ನೀವೇ ನನ್ನ ಪತಿ. ನೀವು ಅಡಿಗೆಯವರಾದರೂ, ರಾಜಕುಮಾರನಾದರೂ ನನಗೆಒಂದೆ" ಆಕೆಯ ಮುಖದಲ್ಲಿ ಮುಗುಳುನಗೆ ಮಿಂಚಿತು. ಕೆಲವು ದಿನಗಳಾದ ನಂತರ ಕುಮುದನು ಗಜವರ್ಮನ ಹತ್ತಿರಕ್ಕೆ ಹೋಗಿ "ಪ್ರಭೂ, ಗಂಗಾತೀರದಲ್ಲಿರುವ ರಾಮನಗರವು ತುಂಬಾ ಅರಾಜಕಸ್ಥಿತಿಯಲ್ಲಿದೆ. ಅಲ್ಲಿನ ಪ್ರಜೆಗಳು ದುಷ್ಪರಿಪಾಲನೆಗೆ ಗುರಿಯಾಗಿ ನಾನಾ ದುರವಸ್ಥೆಗಳಿಗೆ ಗುರಿಯಾಗಿದ್ದಾರೆ. ನನ್ನೊಂದಿಗೆ ಸ್ವಲ್ಪ ಸೈನ್ಯವನ್ನು ಕಳುಹಿಸಿಕೊಟ್ಟರೆ ಅನಾಯಾಸವಾಗಿ ಆ ರಾಜ್ಯವನ್ನು ಜಯಿಸಿ, ನಮ್ಮ ರಾಜ್ಯಕ್ಕೆ ಸೇರಿಸಿಕೊಳ್ಳಬಹುದು" ಎಂದನು.

ಈ ಮಾತುಗಳನ್ನು ಕೇಳಿ ಗಜವರ್ಮನು ತುಂಬಾ ಆನಂದ ಹೊಂದಿದ. ಕುಮುದನು ಸೈನ್ಯದೊಂದಿಗೆ ಪ್ರಯಾಣಹೊರಟು ರಾಮನಗರದಮೇಲೆ ಮುತ್ತಿಗೆಹಾಕಿದ. ವೃದ್ಧನಾದ



ಸುಮಿತ್ರನು ಆ ಮೊದಲೇ ರಾಮನಗರವನ್ನು ಪ್ರವೇಶಿಸಿ ತನ್ನ ಬಂಧುಗಳನ್ನೂ, ಸ್ನೇಹಿತರನ್ನೂ ಭೇಟಿಮಾಡಿ 'ರಾಜಕುಮಾರನು ತನ್ನ ರಾಜ್ಯವನ್ನು ವಶಪಡಿಸಿಕೊಳ್ಳಲು ಬರುತ್ತಿರುವನು' ಎಂದು ಪ್ರಚಾರಮಾಡಿದ.

ಈ ಸುದ್ದಿ ಕಾಳ್ಗಿಚ್ಚಿನಂತೆ ಊರಲೆಲ್ಲಾ ವ್ಯಾಪಿಸಿತು. ವಕ್ರಬುದ್ಧಿಯ ಆಳಿಕೆಯಿಂದ ರೋಸಿಹೋಗಿದ್ದ ಪ್ರಜೆಗಳು ಪ್ರಮುದನ ಬರುವಿಕೆಗಾಗಿ ಎದುರು ನೋಡುತ್ತಿದ್ದರು. ಪ್ರಮುದನು ಸೈನ್ಯದೊಂದಿಗೆ ಗಂಗಾನದಿಯ ಆಚೆ ದಡದಲ್ಲಿ ಬೀಡುಬಿಟ್ಟಕೂಡಲೇ ಅಂತಃಪುರದಲ್ಲಿದ್ದ ವಕ್ರಬುದ್ಧಿಯನ್ನು ನೌಕರರು ಬಂಧಿಸಿ, ಕತ್ತಲೆ ಕೋಣೆಯಲ್ಲಿ ಕೂಡಿದರು. ಯುದ್ಧವೇ ಇಲ್ಲದೆ ಪ್ರಮುದನು ತನ್ನ ರಾಜ್ಯವನ್ನು ಮತ್ತೆ ಸಂಪಾದಿಸಿಕೊಂಡನು.

ವಕ್ರಬುದ್ಧಿಯನ್ನು ಬಹಿರಂಗವಾಗಿ ವಿಚಾರಣೆಗೆ ಗುರಿಮಾಡಿ, ಪ್ರಮುದನು ಆತನಿಗೆ ಶಿರಚ್ಛೇದನ ಶಿಕ್ಷೆಯನ್ನು ವಿಧಿಸಿದನು. ತರುವಾಯ ಆತನು ಹೊಸಮಂತ್ರಿಗಳನ್ನೂ ನೌಕರರನ್ನೂ ನೇಮಿಸಿ, ದುಷ್ಟಶಾಸನಗಳನ್ನು ರದ್ದುಮಾಡಿ, ರಾಜ್ಯವನ್ನು ಸುಸ್ಥಿತಿಗೆ ತಂದನು.

ಮಧುರೆಯಲ್ಲಿ ಕುಮುದನ ಬರುವಿಕೆಗಾಗಿ ಗುಣವತಿಯೂ, ಗಜವರ್ಮನೂ ಕಾತುರದಿಂದ ಎದುರು ನೋಡುತ್ತಿದ್ದರು. ಒಂದು ದಿನ ವಿಜಯಶಾಲಿಯಾದ ಕುಮುದನು ತನ್ನ ಸೈನ್ಯದೊಂದಿಗೆ ಹಿಂತಿರುಗಿ ಬರುತ್ತಿರುವನೆಂಬ ಸುದ್ದಿ ಬಂತು. ಗಜವರ್ಮನು ಹರ್ಷಚಿತ್ತನಾಗಿ ಭಾರಿ ದರ್ಬಾರು ಏರ್ಪಾಟು ಮಾಡಿಸಿದನು. ಕುಮುದನನ್ನು ಮೆರವಣಿಗೆ ಮಾಡಲು ಆತನಿಗೆ ಅಭೂತಪೂರ್ವ ಸ್ವಾಗತ ನೀಡಲು ಬ್ರಹ್ಮಾಂಡವಾದ ವ್ಯವಸ್ಥೆಗಳು ನಡೆದುವು. ಊರಲ್ಲೆಲ್ಲಾ ತಳಿರು ತೋರಣಗಳನ್ನು ಕಟ್ಟಿದರು. ಪ್ರತಿಯೊಬ್ಬರೂ ತಮ್ಮ ತಮ್ಮ ಮನೆಯ ಬಾಗಿಲಿಗೆ ಅರಸಿನ ಕುಂಕುಮವಿಟ್ಟು ಅಲಂಕರಿಸಿದರು. ಹೆಬ್ಬಾಗಿಲಲ್ಲಿ ಮುತ್ತೈದೆಯರು ಆರತಿ ತಟ್ಟೆ, ಹೂವಿನ ಹಾರಗಳೊಂದಿಗೆ ನಿಂತಿದ್ದರು. ಕುಮುದನು ಮೆರವಣಿಗೆ ಮುಗಿಸಿಕೊಂಡು, ದರ್ಬಾರನ್ನು ಸೇರಿದನು.

ಸಿಂಹಾಸನದಮೇಲೆ ಗಜವರ್ಮನು ಕುಳಿತಿದ್ದನು. ಆತನ ಇಕ್ಕಡೆಗಳಲ್ಲೂ ಇದ್ದ ಆಸನ

ಗಳ ಮೇಲೆ ಪ್ರಮುದನೂ, ಗುಣವತಿಯೂ ಕುಳಿತುಕೊಂಡರು. ಎಲ್ಲರೂ ಅವರನ್ನೆ ನೋಡುತ್ತಿದ್ದರು. ಗಜವರ್ಮನು ಕುಮುದನಕಡೆ ತಿರಿಗಿ "ಮಗೂ, ನೀನು ಮಥುರಾನಗರದ ಕೀರ್ತಿಯನ್ನು ಉಳಿಸಿದೆ. ಮಥುರೆಗೆ ರಾಮನಗರವನ್ನು ಗೆದ್ದುಕೊಟ್ಟೆ. ನಿನಗೆ ನಾನೇನು ಬಹುಮಾನ ಕೊಡಲಿ?" ಎಂದು ಕೇಳಿದ.

"ಮಹಾ ಪ್ರಭುಗಳೇ, ನಿಮ್ಮದು ತಪ್ಪು ಗ್ರಹಿಕೆ. ನಾನು ರಾಮನಗರವನ್ನು ಮಥುರೆಗೆ ಗೆದ್ದುಕೊಡಲಿಲ್ಲ. ರಾಮನಗರವು ನನ್ನದೇ! ಅದನ್ನು ಶತ್ರುಗಳಿಂದ ಮತ್ತೆ ಸಂಪಾದಿಸಿಕೊಂಡೆ. ನೀವು ಸಹಾಯ ಮಾಡಿದರೆ ರಾಮನಗರಕ್ಕೆ ಮಥುರೆಯನ್ನು ಸೇರಿಸಿಕೊಳ್ಳುವೆನು" ಎಂದ ಪ್ರಮುದ ಗಂಭೀರವಾಗಿ.

ಗಜವರ್ಮನು ಕ್ರುದ್ಧನಾಗಿ "ಎಲೈ ಕೃತಘ್ನನೇ, ಅಡಿಗೆಯವನಾದ ನಿನಗೆ ಇಷ್ಟು ಗೌರವ ಕೊಟ್ಟಿದುದಕ್ಕೆ ನನ್ನ ಸಿಂಹಾಸನವನ್ನೇ ಬಯಸುವೆಯಾ? ನೋಡು, ನಿನಗೆ ಎಂಥಹ ಶಿಕ್ಷೆ ವಿಧಿಸುವೆನೋ" ಎಂದು ಹಲ್ಲು ಕಡಿದು ಹೂಂಕರಿಸಿದನು.

"ನಾನು ಅಡಿಗೆಯವನಲ್ಲ. ನನ್ನ ಹೆಸರು ಪ್ರಮುದಕುಮಾರ, ಕುಮುದನಲ್ಲ. ನಾನು ರಾಮನಗರದ ರಾಜ. ನಿಮ್ಮ ಮಥುರಾನಗರದ ರಾಜಕುಮಾರಿಯ ಗಂಡ. ನಿಮಗೆ ಇನ್ನು ಈ ಸಿಂಹಾಸನದಲ್ಲಿ ಸ್ಥಳವಿಲ್ಲ. ದಯವಿಟ್ಟು ಏಳಿ" ಎಂದು ಪ್ರಮುದನೆಂದ.

ಗಜವರ್ಮನು ಕುಪಿತನಾಗಿ ಒರೆಯಿಂದ ಕತ್ತಿಯನ್ನು ತೆಗೆದು ಚಂಗನೆ ಪ್ರಮುದನ ಮೇಲೆ ಹಾರಿದ. ಆದರೆ ಮಹಾ ಬಲಶಾಲಿಯೂ, ತೀಕ್ಷ್ಣಬುದ್ಧಿಯುಳ್ಳವನೂ ಆದ ಪ್ರಮುದನು ಆತನ ಕೈಯನ್ನು ಗಟ್ಟಿಯಾಗಿ ಹಿಡಿದುಬಿಟ್ಟನು. ಗಜವರ್ಮನು ಬಹಳ ಹೆಣಗಾಡಿದ. ಆತನ ಕೈಯಲ್ಲಿದ್ದ ಕತ್ತಿ ಕೆಳಗೆ ಬಿದ್ದು ಹೋಯಿತು. ಆತನ ಕೈ ಮೂಳೆಗಳು ಪಟಪಟನೆಂದು ಮುರಿದವು.

ಪ್ರಮುದನು ಗಜವರ್ಮನನ್ನು ಸೆರೆಮನೆಗೆ ಹಾಕಿಸಿದನು. ನಂತರ ತುಂಬಿದ ಸಭೆಯಲ್ಲಿ ತನ್ನ ಕಥೆಯನ್ನೆಲ್ಲಾ ವಿವರವಾಗಿ ತಿಳಿಸಿದನು. ಮಥುರಾನಗರದ ಪ್ರಜೆಗಳು ಆತನನ್ನು ತಮ್ಮ ರಾಜನನ್ನಾಗಿ ಸ್ವೀಕರಿಸಿದರು.





# ಧನಲೋಭ

**ಪೂ**ರ್ವಕಾಲದಲ್ಲಿ ದ್ರೋಣಪುರಿ ಎಂಬ ಪಟ್ಟಣದಲ್ಲಿ ಬಡಬ್ರಾಹ್ಮಣನೊಬ್ಬನಿದ್ದನು. ಅವನ ಹೆಸರು ಸೋಮಶರ್ಮ. ಹೆಂಡತಿ ಮತ್ತು ನಾಲ್ವರು ಮಕ್ಕಳೊಂದಿಗೆ ಬಡತನ ಅನುಭವಿಸುತ್ತಾ ಕುಸಿಯುತಲಿದ್ದನು.

ತನ್ನ ಕಂಗಾಲುಸ್ಥಿತಿಯಿಂದ ಹೇಗಾದರೂ ಹೊರಬೀಳಲು ದಿನಾ ಯೋಚಿಸುವನು ಸೋಮಶರ್ಮ. ಯಾರಾದರೊಬ್ಬ ರಾಜನ ಆಸ್ಥಾನಕ್ಕೆ ಹೋದರೆ ಈ ಬಡತನ ಕೊನೆಗಾಣಬಹುದು. ಆದರೆ ರಾಜಾಶ್ರಯ ಪಡೆಯಲು ತಾನು ಘನಪಂಡಿತನೂ ಅಲ್ಲ, ಮಹಾಕವಿಯೂ ಅಲ್ಲ, ಲೌಕಿಕಜ್ಞಾನಿಯೂ ಅಲ್ಲ. ಹೀಗಿರಲು ರಾಜಾಶ್ರಯ ಸಿಗುವುದು ಹೇಗೆ?

"ರಾಜಾಶ್ರಯ ದೊರೆಯದಿದ್ದರೆ ಏನಾಯಿತು? ಎಲ್ಲರನ್ನೂ ಸೃಷ್ಟಿಸಿದ ಪರಶಿವನನ್ನು ಪ್ರಾರ್ಥಿಸುವೆನು. ಆತನ ಕರುಣೆ ಸಂಪಾದಿಸಲು ಪಂಡಿತ ಪಾಮರರೆಂಬ ಭೇದವಿರುವುದಿಲ್ಲ. ನಿರ್ಮಲಹಾಗೂ ನಿಶ್ಚಲ ಭಕ್ತಿಯಿಂದ ಆತನನ್ನು ಕುರಿತು ತಪಸ್ಸನ್ನು ಆಚರಿಸಿದರೆ ಸಾಕು" ಎಂದುಕೊಂಡ ಶರ್ಮ. ಹೀಗೆಂದು ನಿರ್ಧರಿಸಿಕೊಂಡು, ಪತ್ನಿಯೊಂದಿಗೆ "ಲೇ, ನಾನು ತಪಸ್ಸುಮಾಡಲು ಕಾಡಿಗೆ ಹೋಗುತ್ತೇನೆ. ಅಲ್ಲಿ ಕೆಲವು ದಿನಗಳಿದ್ದು ಹಿಂತಿರುಗುತ್ತೇನೆ" ಎಂದು ಹೇಳಿ ಮನೆಬಿಟ್ಟನು. ಕೆಲವು ದಿನಗಳು ಪ್ರಯಾಣ ಮಾಡಿದನಂತರ ಒಂದು ಅರಣ್ಯ ಸಿಕ್ಕಿತು. ಅಲ್ಲೊಂದು ಮರದಡಿ ಪದ್ಮಾಸನ ಹಾಕಿ ಕುಳಿತು, ಶಿವನನ್ನುಕುರಿತು ತಪಸ್ಸುಮಾಡಲಾರಂಭಿಸಿದನು.

ಒಂದೆರಡು ಗಂಟೆಗಳು ಕಳೆದವು. ಹಸಿವು ಬಾಯಾರಿಕೆಯಿಂದ ಶರ್ಮನಿಗೆ ಬವಳಿ ಬಂತು. ಆತನ ಮನಸ್ಸು ಶಿವನಮೇಲಿಂದ ಆಹಾರದ ಕಡೆಗೆ ಓಡಿತು. ಒಂದು ವಾರ ಕಳೆಯಲು ಬವಳಿ ಬಂದು ಬಿದ್ದುಹೋಗಿ 'ಶಿವಶಿವ' ಎನ್ನುವ ಧ್ಯಾನದ ಬದಲಾಗಿ 'ಅನ್ನ-ನೀರು' ಎಂದು ಕನವರಿಸುತ್ತಿದ್ದ.

ಆಗ ಆ ಮಾರ್ಗವಾಗಿ ಒಬ್ಬ ಮುನೀಶ್ವರನು ಹೋಗುತ್ತಿದ್ದ. ಆತನಿಗೆ ಸೋಮಶರ್ಮನ ಮಾತುಗಳು ಕೇಳಿಸಿದವು. ಆತನು

ಟಿ. ಶ್ರೀನಿವಾಸಯ್ಯ, ಯಳಂದೂರು




ಹತ್ತಿರಕ್ಕೆ ಹೋಗಿ, ತನ್ನ ಕಮಂಡಲುದಿಂದ ಸ್ವಲ್ಪ ನೀರನ್ನು ಶರ್ಮನ ಬಾಯಿಗೆ ಸುರಿದನು.

ಬಾಯಿ ಕೊಂಚ ತೇವವಾಗಲು ಶರ್ಮ ಎದ್ದು ಕುಳಿತುಕೊಂಡ. ಆಗ ಮುನೀಶ್ವರನು "ಅಣ್ಣಾ, ನೀನು ಯಾರು? ಈ ಅರಣ್ಯದಲ್ಲಿ 'ಅನ್ನ-ನೀರು' ಎಂದು ಕನವರಿಸುವ ದುಸ್ಥಿತಿ ನಿನಗೆ ಹೇಗೆ ಬಂತು?" ಎಂದು ಕೇಳಿದ.

ಮುನಿ ಈ ರೀತಿ ಪ್ರಶ್ನೆಮಾಡಲು ಶರ್ಮನು ತಬ್ಬಿಬ್ಬಾದನು. ತಾನು ಶಿವಧ್ಯಾನವನ್ನು ಮಾಡುತ್ತಿದ್ದೆನೆಂತಲೇ ಆತನ ಊಹೆ!

"ಸ್ವಾಮಿ, ನೀವು ತಪ್ಪು ಅಭಿಪ್ರಾಯ ಪಟ್ಟಿರುವಿರಿ. ನಾನು 'ಅನ್ನ-ನೀರು' ಎಂದೆನ್ನುತ್ತಿರಲಿಲ್ಲ. ಪರಮೇಶ್ವರನನ್ನು ಕುರಿತು 'ಶಿವ-ಶಿವ' ಎಂದು ಧ್ಯಾನಮಾಡುತ್ತಿದ್ದೆ" ಎಂದ.

ಮುನೀಶ್ವರನಿಗೆ ಸೋಮಶರ್ಮನನ್ನು ಕಂಡು ಬಹಳ ಮರುಕವಾಯಿತು. "ಮಗೂ ಮುಕ್ತಿಯನ್ನು ಪಡೆಯಲು ನೀನು ಈ ಅರಣ್ಯಕ್ಕೆ ಬಂದಂತಾಯಿತು" ಎಂದ ತುಂಬಾ ಅನುಕಂಪದಿಂದ.

ಆಗ ಸೋಮಶರ್ಮನಿಗೆ ನಿಜ ಹೇಳಲೇ ಬೇಕಾಯಿತು. ಎಲ್ಲವನ್ನೂ ಕೇಳಿ ಮುನೀಶ್ವರನು ನಸುನಗೆ ಬೀರಿದನು.

"ಮಗೂ, ಕೇವಲ ಧನಲಾಭಕ್ಕೆ ಆ ವಿಶ್ವೇಶ್ವರನನ್ನು ಕುರಿತು ತಪಸ್ಸುಮಾಡುವ ಅವಶ್ಯಕತೆಯಿಲ್ಲ. ಅದು ವೃಥಾ ಶ್ರಮವಾಗುವುದು. ನಿನಗೆ ಹಣವೇ ಬೇಕಾಗಿದ್ದ ಪಕ್ಷಕ್ಕೆ ಅದನ್ನು ಯಾವ ಸಿದ್ಧನಾದರೂ ತೀರಿಸಬಲ್ಲ. ನೀನು ಸ್ವಲ್ಪ ಹೊತ್ತು ಇಲ್ಲೇ ನಿಂತಿರು. ಈಗಲೇ ಬರುವೆನು" ಎಂದು ಮುನೀಶ್ವರನು ಅಲ್ಲಿಂದ ಎದ್ದು ಮರಗಳ ಮಧ್ಯೆ ಅದೃಶ್ಯನಾದನು. ಸ್ವಲ್ಪ ಸಮಯದ ನಂತರ ಮತ್ತೆ ಬಂದು:

"ಮಗೂ, ಈ ಕಮಂಡಲುವನ್ನು ತೆಗೆದುಕೋ. ಇದರಲ್ಲಿ ಮಂತ್ರಶಕ್ತಿಯುಳ್ಳ ಜಲವಿದೆ. ಯಾವ ಲೋಹವಾದರೂಸರಿ. ಒಂದು ತೊಟ್ಟು ಹಾಕಿದೆ ಎಂದರೆ ಆ ಲೋಹ ಮರುಕ್ಷಣವೇ ಚಿನ್ನವಾಗುವುದು. ಇನ್ನು ಮನೆಗೆ ಹೋಗಿ ಸುಖವಾಗಿರು" ಎಂದು ಹರಸಿದ.

ಶರ್ಮನು ಮುನೀಶ್ವರನಿಗೆ ನಮಸ್ಕಾರ ಮಾಡಿ ಮನೆಯಕಡೆ ಹೊರಟ. ಎರಡು ದಿನ ನಡೆದು ಒಂದು ಗ್ರಾಮವನ್ನು ಸೇರಿಕೊಂಡ. ಅಲ್ಲಿಯ ಶಿವಾಲಯದ ಸಮೀಪದಲ್ಲೇ ಇದ್ದ

ಒಬ್ಬ ಅಕ್ಕಸಾಲಿಗನ ಮನೆಯ ಜಗಲಿಯ ಮೇಲೆ ಕುಳಿತುಕೊಂಡ. ಆಗ ಸೂರ್ಯನು ನಡುನೆತ್ತಿಗೆ ಬಂದಿದ್ದನು. ಶರ್ಮನನ್ನು ಹಸಿವು ದಹಿಸುತಿತ್ತು. ಅಷ್ಟರಲ್ಲಿ ಮನೆಯೊಳಗಿನಿಂದ ಅಕ್ಕಸಾಲಿಗನು ಬಂದು ಇವನನ್ನು ನೋಡಿ, "ಅಯ್ಯಾ, ಕೆಲಸದಲ್ಲಿ ತೊಡಗಿದ್ದರಿಂದ ನೀವು ಬಂದುದನ್ನು ಗಮನಿಸಲಿಲ್ಲ. ಕ್ಷಮಿಸ ಬೇಕು. ನೀವು ಕೆರೆಯಲ್ಲಿ ಸ್ನಾನ ಮಾಡಿಕೊಂಡು ಬರುವಷ್ಟರಲ್ಲಿ ಸ್ವಯಂಪಾಕಕ್ಕೆ ಆಗತ್ಯವಾದ ಪದಾರ್ಥಗಳನ್ನೆಲ್ಲಾ ಅಣಿ ಮಾಡಿಟ್ಟಿರುವೆನು" ಎಂದ.

ಸೋಮಶರ್ಮನು ಅದಕ್ಕೆ ಒಪ್ಪಿಕೊಂಡು ತನ್ನ ಹತ್ತಿರವಿದ್ದ ಕಮಂಡಲುವನ್ನು ವಿಶ್ವಕರ್ಮನ ಕೈಗೆ ಕೊಟ್ಟು, "ಯಜಮಾನರೇ, ಇದರಲ್ಲಿರುವ ನೀರು ತುಳುಕಾಡದಂತೆ ಜೋಪಾನವಾಗಿಡಬೇಕು. ನಿಮ್ಮ ಆತಿಥ್ಯಕ್ಕೆ ನಾನು ಕೃತಜ್ಞ" ಎಂದು ಸ್ನಾನಕ್ಕೆ ಹೋದನು.

ಸೋಮಶರ್ಮನು ಅತ್ತ ಹೋದಕೂಡಲೇ ವಿಶ್ವಕರ್ಮನು ಕಮಂಡಲುವನ್ನು ತೆಗೆದುಕೊಂಡು ಮನೆಯೊಳಕ್ಕೆ ಹೋದನು. ಅದೇ ಸಮಯದಲ್ಲಿ ಕುಲುಮೆಯಲ್ಲಿದ್ದ ಬೆಳ್ಳಿಯ ಕೂವೆಯಿಂದ ಬೆಳ್ಳಿ ಕರಗಿ ಕುಲುಮೆಯಲ್ಲಿ ಬೀಳುತ್ತಿರುವುದು ಕಾಣಿಸಿತು 'ಅಯ್ಯೋ' ಎಂದು ಅರಚುತ್ತಾ ವಿಶ್ವಕರ್ಮನು ಕುಲುಮೆಯ ಹತ್ತಿರಕ್ಕೆ ಹಾರಿದ. ಹಾಗೆ ಹಾರಿದಾಗ ಕಮಂಡಲುದಲ್ಲಿದ್ದ ನೀರು ತುಳುಕಿ, ಒಂದೆರಡು ತೊಟ್ಟು ಅಲ್ಲಿದ್ದ ಸುತ್ತಿಗೆಯಮೇಲೆ



ಬಿದ್ದಿತು. ಕ್ಷಣಮಾತ್ರದಲ್ಲಿ ಆ ಕಬ್ಬಿಣದ ಸುತ್ತಿಗೆ ಥಳಥಳಿಸುವ ಬಂಗಾರವಾಯಿತು!

ವಿಶ್ವಕರ್ಮನಿಗೆ ಇದು ಸೋಜಿಗವಾಗಿ ತೋರಿತು. ಕಮಂಡಲುದಲ್ಲಿದ್ದ ನೀರಿನ ಒಂದೆರಡು ಬೊಟ್ಟುಗಳನ್ನು ಚಿಮುಟಿಯ ಮೇಲೆ ಹಾಕಿನೋಡಿದ. ಅದೂ ಚಿನ್ನವಾಯಿತು.

ಅಂದಿನವರೆವಿಗೆ ಧರ್ಮಬುದ್ಧಿಯುಳ್ಳ ಆ ವಿಶ್ವಕರ್ಮನಿಗೆ ದುರ್ಬುದ್ಧಿ ಯುಂಟಾಯಿತು. ಕಮಂಡಲುದಲ್ಲಿರುವುದು ಸಾಮಾನ್ಯವಾದ ನೀರಲ್ಲವೆಂತಲೂ, ಅದನ್ನು ಹೇಗಾದರೂ ಅಪಹರಿಸಿ ಶ್ರೀಮಂತನಾಗಬೇಕೆಂತಲೂ ಆತನು ಯೋಚಿಸಿದನು.

ಚಿನ್ನವಾಗಿ ಬದಲಾಯಿಸಿದ್ದ ಸುತ್ತಿಗೆಯನ್ನೂ, ಚಿಮುಟಿಯನ್ನೂ, ಕಮಂಡಲುವನ್ನೂ




ವಿಶ್ವಕರ್ಮನ ಮನೆಗೆ ಬೆಂಕಿಬಿದ್ದಿರುವುದನ್ನು ಕಂಡು ಗ್ರಾಮಸ್ಥರು ಬೆಂಕಿ ಆರಿಸಲು ಪ್ರಯತ್ನಿಸುತ್ತಿದ್ದರು. ಆದರೆ ಅವರ ಪ್ರಯತ್ನ ವಿಫಲವಾಗಿ, ಮನೆಯೆಲ್ಲಾ ಭಸ್ಮವಾಯಿತು!

ಆವೇಳೆಗೆ ಸೋಮಶರ್ಮನು ಸ್ನಾನ ಮುಗಿಸಿಕೊಂಡು ಅಲ್ಲಿಗೆ ಬಂದನು. ವಿಶ್ವಕರ್ಮನು ಅಳುತ್ತಾ "ಸ್ವಾಮಿ, ನನ್ನ ಮನೆಯೆಲ್ಲಾ ಭಸ್ಮವಾಯಿತು. ನನ್ನ ಯಾವತ್ತೂ, ಆಸ್ತಿ ನಾಶವಾಯಿತು. ನಿಮ್ಮ ಕಮಂಡಲುವನ್ನಾದರೂ ರಕ್ಷಿಸಲು ಪ್ರಯತ್ನ ಮಾಡಿದೆ. ಬೆಂಕಿಯ ಜ್ವಾಲೆಗಳಿಂದ ನನ್ನ ಕೈಯಲ್ಲಿ ಸಾಧ್ಯವಾಗಲಿಲ್ಲ. ಕ್ಷಮಿಸಬೇಕು" ಎಂದು ಗೋಳಾಡಿದನು.

ಒಂದು ಬಟ್ಟೆಯಲ್ಲಿ ಜೋಪಾನವಾಗಿ ಸುತ್ತಿ, ಪೆಟ್ಟಿಗೆಯಲ್ಲಿಟ್ಟನು. ತರುವಾಯ ಮನೆಗೆ ಬೆಂಕಿಹೊತ್ತಿಸಿ, ಗೋಳಾಡುತ್ತಾ, ಆ ಪೆಟ್ಟಿಗೆಯೊಂದಿಗೆ ಹೊರಬಿದ್ದನು.

ವಿಶ್ವಕರ್ಮನ ಮನೆಯ ಪಕ್ಕದಲ್ಲೇ ಶಂಭುದಾಸನೆಂಬ ಗೃಹಸ್ಥನಿದ್ದನು. ವಿಶ್ವಕರ್ಮನು ಅರಚುತ್ತಾ, ಗೋಳಾಡುತ್ತಾ ಆತನ ಮನೆಗೆ ಹೋಗಿ "ಅಯ್ಯೋ, ನನ್ನ ಮನೆಗೆ ಬೆಂಕಿ ಹತ್ತಿಕೊಂಡಿತು. ಈ ಪೆಟ್ಟಿಗೆಮಾತ್ರ ಕೈಗೆ ಸಿಕ್ಕಿತು. ಅಯ್ಯೋ, ಏನುಮಾಡಲಿ. ಇದನ್ನು ದಯವಿಟ್ಟು ನಿಮ್ಮ ಮನೆಯಲ್ಲಿಟ್ಟಿರಿ" ಎಂದು ಶಂಭುದಾಸನ ಮೊರೆಹೊಕ್ಕನು.

ಶಂಭುದಾಸನು 'ಸರಿ' ಎಂದು ಪೆಟ್ಟಿಗೆಯನ್ನು ತನ್ನ ಮನೆಯಲ್ಲಿಟ್ಟುಕೊಂಡನು.

ಸೋಮಶರ್ಮನ ಬಾಯಿಂದ ಒಂದೆರಡು ಕ್ಷಣ ಮಾತು ಹೊರಡಲಿಲ್ಲ. ಶ್ರಮಪಟ್ಟು ಸಂಪಾದಿಸಿದುದನ್ನು ಅನುಭವಿಸಲಾಗದೆ ಹಾಳಾಯಿತಲ್ಲಾ ಎಂದು ವ್ಯಥೆಪಟ್ಟ. ಮಂತ್ರಜಲವಿಲ್ಲದಿದ್ದರೂ, ಆ ಮಹಿಮೆಯ ಕಮಂಡಲುವಾದರೂ ಆ ಬೂದಿಯಲ್ಲಿ ಕಾಣಿಸುವುದೆಂದು ಹುಡುಕಾಡಿದ.

ಮನೆಯಲ್ಲಿದ್ದ ತಾಮ್ರ, ಹಿತ್ತಾಳೆ ಪಾತ್ರೆಗಳೆಲ್ಲಾ ಬೆಂದು ಮುದ್ದೆಯಾಗಿ ಕಂಡುಬಂದವಾದರೂ ಕಮಂಡಲು ಮಾತ್ರ ಕಾಣಿಸಲಿಲ್ಲ. ಸೋಮಶರ್ಮನಿಗೆ ವಿಶ್ವಕರ್ಮನ ಮೇಲೆ ಅನುಮಾನ ಉಂಟಾಯಿತು. ಮಂತ್ರಜಲದ ಮಹತ್ವವನ್ನು ಅರಿತು ಈತನು ದ್ರೋಹವೆಸಗಿರುವನೆಂದು ಊಹಿಸಿದ. ಇಂತಹ

ದುಷ್ಟನೊಂದಿಗೆ ವಾದಿಸಿ ಪ್ರಯೋಜನವಿಲ್ಲವೆಂದು, ನೆಟ್ಟಗೆ ಗ್ರಾಮಾಧಿಕಾರಿಯ ಹತ್ತಿರ ಹೋಗಿ ಫಿರ್ಯಾದು ಮಾಡಿದ.

ಗ್ರಾಮಾಧಿಕಾರಿ ವಿಶ್ವಕರ್ಮನನ್ನು ಕರೆಯಿಸಿ ನಯಭಯಗಳಿಂದ ಕೇಳಿ ನೋಡಿದ. "ಸ್ವಾಮಿ, ಸೋಮಶರ್ಮನು ಕಮಂಡಲುವನ್ನು ಜೋಪಾನವಾಗಿಡುವಂತೆ ಹೇಳಿದ ಮಾತು ನಿಜ" ಎಂದು ಒಪ್ಪಿಕೊಂಡ ವಿಶ್ವಕರ್ಮ. ತನ್ನ ಮನೆಯ ಸಾಮಾನುಗಳೊಂದಿಗೆ ಅದೂ ಸಹ ದಗ್ಧವಾಯಿತೆಂದು ಹೇಳಿದ.

ಗ್ರಾಮಾಧಿಕಾರಿಗೆ ಇದು ನಿಜವಿರಬಹುದೆಂದು ತೋರಿತು. 'ಪೆಟ್ಟಿಗೆ, ಪಾತ್ರೆ, ನಗದೆಲ್ಲಾ ಸುಟ್ಟು ಬೂದಿಯಾಗಿರಲು ಈ ಕಮಂಡಲು ಮಾತ್ರ ಯಥಾರೀತಿಯಿರಲು ಸಾಧ್ಯವಿಲ್ಲ! ಎಂದು ಭಾವಿಸಿದ. "ನಿನ್ನ ಕರ್ಮ. ಮಾಡುವುದೇನು? ಹೋದುದು ಹೋಯಿತು; ಮನೆಗೆ ಹೋಗು" ಎಂದು ಸೋಮಶರ್ಮನಿಗೆ ಗ್ರಾಮಾಧಿಕಾರಿ ಹೇಳಿದ.

ವಿಚಾರಣೆ ಕೇಳಲು ಬಂದ ಗ್ರಾಮಸ್ಥರಲ್ಲಿ ಶಂಭುದಾಸನೂ ಒಬ್ಬ. 'ವಿಶ್ವಕರ್ಮನು ತನ್ನ ಸಾಮಾನುಗಳೆಲ್ಲಾ ಸುಟ್ಟುಹೋದವೆಂದು ಹೇಳುವನೇ ಹೊರತು, ತನ್ನ ಹತ್ತಿರ ಕೊಟ್ಟಿರುವ ಪೆಟ್ಟಿಗೆಯ ವಿಷಯ ಏಕೆ ಹೇಳುತ್ತಿಲ್ಲ?' ಎಂದು ಸಂಶಯಗೊಂಡನು.

ಮನೆಗೆ ಹೋಗಿ ಆ ಪೆಟ್ಟಿಗೆಯನ್ನು ತೆಗೆದುಕೊಂಡು ಬಂದು ಗ್ರಾಮಾಧಿಕಾರಿಯ ಮುಂದೆ ಇಟ್ಟು, ನಡೆದುದನ್ನೆಲ್ಲಾ ಹೇಳಿಬಿಟ್ಟ ಶಂಭುದಾಸ. ಗ್ರಾಮಾಧಿಕಾರಿ ಪೆಟ್ಟಿಗೆಯ ಬೀಗ ಒಡೆಸಿ ನೋಡಲು, ಅದರಲ್ಲಿ ಕಮಂಡಲುದೊಂದಿಗೆ ಚಿನ್ನದ ಸುತ್ತಿಗೆ, ಚಿಮುಟ ಕಾಣಿಸಿದವು. ವಿಶ್ವಕರ್ಮನ ಮೋಸ ತಿಳಿಯಿತು.

ಗ್ರಾಮಾಧಿಕಾರಿ ವಿಶ್ವಕರ್ಮನಿಗೆ ಜುಲ್ಮಾನೆ ವಿಧಿಸಿ, ಸುತ್ತಿಗೆ, ಚಿಮುಟಗಳೊಂದಿಗೆ ಕಮಂಡಲುವನ್ನು ಶರ್ಮನಿಗೆ ಕೊಡಿಸಿದನು. ಶರ್ಮನು ಎಲ್ಲವನ್ನೂ ತೆಗೆದುಕೊಂಡು ಮನೆಗೆ ಹೋದನು. ಮಂತ್ರಶಕ್ತಿಯುಳ್ಳ ಜಲವನ್ನು ಎರಚಿ, ತಾಮ್ರ, ಹಿತ್ತಾಳೆ ಪಾತ್ರೆಗಳನ್ನು ಚಿನ್ನವನ್ನಾಗಿ ಬದಲಾಯಿಸಿದ. ಈ ರೀತಿ ಶರ್ಮನ ದಾರಿದ್ರ್ಯವು ತೊಲಗಿತು; ಸುಖವಾಗಿದ್ದನು.



# ಕಾನಿಷ್ಕನ ಔದಾರ್ಯ




ಅನೇಕ ವರ್ಷಗಳ ಹಿಂದೆ ಕುಷಾನ್ ವಂಶಸ್ಥನಾದ ಕಾನಿಷ್ಕನು, ಪುರುಷಪುರವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಉತ್ತರ ಭಾರತವನ್ನು ಪರಿಪಾಲಿಸುತ್ತಿದ್ದನು. ಆತನು ದೈವಾಂಶ ಸಂಭೂತನೆಂಬ ಪ್ರತೀತಿ ಪ್ರಜೆಗಳಲ್ಲಿ ಹರಡಿತ್ತು. ಕಾನಿಷ್ಕನು ದಯಾಧರ್ಮಗಳಿಗಷ್ಟೇ ಅಲ್ಲ ಧೈರ್ಯಸಾಹಸಗಳಿಗೂ ಹೆಸರುಹೋಗಿದ್ದ. ಅನೇಕ ರಾಜರನ್ನು ಜಯಿಸಿ, ಸಾಮಂತರನ್ನಾಗಿ ಮಾಡಿಕೊಂಡಿದ್ದ. ಅಂತಹವರಲ್ಲಿ ಕನ್ಯಾಕುಬ್ಜದ ರಾಜನೂ ಒಬ್ಬ. ಕಾನಿಷ್ಕನ ವರ್ಧಂತಿಗೆ ಸಾಮಂತ ರಾಜರೆಲ್ಲ ಕಾಣಿಕೆ ಸಲ್ಲಿಸುವುದು ಆಚರಣೆಯಲ್ಲಿತ್ತು. ಅದರಂತೆ ಒಂದುಸಾರಿ ಸಾಮಂತರು ತಮ್ಮ ಶಕ್ತ್ಯಾನುಸಾರ ಕಾಣಿಕೆಗಳನ್ನು ಕಳುಹಿಸಿದರು. ಕನ್ಯಾಕುಬ್ಜದ ಅರಸನೂ ತನ್ನ ಕಾಣಿಕೆಯಾಗಿ ಬಹಳ ಬೆಲೆ ಬಾಳುವ ರೇಷಿಮೆ ಬಟ್ಟೆಯನ್ನು ಕಳುಹಿಸಿಕೊಟ್ಟಿದ್ದ.

ತನಗೆ ಬಂದ ಕಾಣಿಕೆಗಳಲ್ಲಿ ರೇಷಿಮೆಯ ಬಟ್ಟೆ ಕಾನಿಷ್ಕನನ್ನು ಬಹಳ ಆಕರ್ಷಿಸಿತ್ತು. ಅದರಿಂದ ಒಂದು ಕವಚವನ್ನು ಹೊಲಿಸಬೇಕೆಂದು ನಿಶ್ಚಯಿಸಿ ದರ್ಜಿಯುವನಿಗೆ ಹೇಳಿ ಕಳುಹಿಸಿದ. ಅವನು ಬಂದಕೂಡಲೇ ಬಟ್ಟೆಯನ್ನು ಕೊಟ್ಟು ಒಂದು ವಾರದಲ್ಲಿ ಕವಚ ಸಿದ್ಧಮಾಡಿ ಕೊಡಬೇಕೆಂದು ಅಪ್ಪಣೆ ಮಾಡಿದ. ಆದರೇನು? ಒಂದಲ್ಲ, ಎರಡು ವಾರಗಳಾದರೂ ದರ್ಜಿ ಅಂಗಿ ಸಿದ್ಧಗೊಳಿಸಿ ತರಲಿಲ್ಲ. ಕಾನಿಷ್ಕನು ಕೋಪಗೊಂಡು, ದರ್ಜಿಯುವನನ್ನು ತಕ್ಷಣ ಹಿಡಿದು ತರಬೇಕೆಂದು ಭಟರಿಗೆ ಆಜ್ಞಾಪಿಸಿದ. ಭಟರು ಕೂಡಲೇ ಹೊರಟುಹೋಗಿ ದರ್ಜಿಯುವನನ್ನು ಕಾನಿಷ್ಕನ ಬಳಿಗೆ ಎಳೆದುತಂದರು.

ಅವನನ್ನು ನೋಡಿದ ತಕ್ಷಣ ಕಾನಿಷ್ಕನ ಕೋಪ ಇಮ್ಮಡಿಸಿತು. "ಅಂಗಿ ಏಕೆ ತರಲಿಲ್ಲ? ತಡವೇಕೆ ಆಯಿತು?" ಎಂದು ಗದರಿ

ಎ. ಎಂ. ಧನಪಾಲ

ಸಿದ. ಅದಕ್ಕೆ ಆ ದರ್ಜಿ ಕೈ ಜೋಡಿಸಿ "ಮಹಾಪ್ರಭೂ, ಇದರಲ್ಲಿ ನನ್ನ ತಪ್ಪೇನೂ ಇಲ್ಲ. ಅಂಗಿ ಹೊಲಿಯುವಂತೆ ತಾವು ಕೊಟ್ಟ ರೇಷಿಮೆ ಬಟ್ಟೆಯಮೇಲೆ ಎರಡು ಪಾದಗಳ ಗುರುತು ನೇಯಲ್ಪಟ್ಟಿದೆ. ಬಟ್ಟೆಯನ್ನು ಹೇಗೆ ತಿರುಗಿಸಿ ಹೊಲಿದರೂ ಆ ಪಾದದ ಗುರುತು ಗಳು ಬೆನ್ನಿನಮೇಲೆ ಬರುತ್ತವೆ. ತಾವೇ ಪರಿ ಶೀಲಿಸೋಣವಾಗಲಿ" ಎಂದು ರೇಷಿಮೆಯ ಬಟ್ಟೆಯನ್ನು ಕಾನಿಷ್ಕನಿಗೆ ಕೊಟ್ಟ.

ಕಾನಿಷ್ಕನಿಗೆ ವಿಪರೀತ ಕೋಪಬಂತು. ರೇಷಿಮೆಯ ಬಟ್ಟೆಯನ್ನು ಸೂಕ್ಷ್ಮವಾಗಿ ಪರಿಶೀಲಿಸಿ ನೋಡಲು ದರ್ಜಿಯವನ ಮಾತು ಸತ್ಯವೆಂದು ತಿಳಿಯಿತು. ಆಗ ಆತನ ರೌದ್ರಾ ವೇಶಕ್ಕೆ ಮಿತಿಯಿಲ್ಲದಾಯಿತು.

"ಈ ಕನ್ಯಾಕುಬ್ಜ ಸಾಮಂತನು ನನ್ನನ್ನು ಅವಮಾನಗೊಳಿಸುವಂತಾದನೇ? ಅವನ ಅಹಂಕಾರ ಮುರಿಯುತ್ತೇನೆ" ಎಂದು ಮಂತ್ರಿ ಸೇನಾಧಿಕಾರಿಗಳೊಂದಿಗೆ ಚರ್ಚಿಸಿದ. ಒಂದು ವಾರದಲ್ಲಿ ಎಲ್ಲ ಸೇನೆಯನ್ನೂ ಸಿದ್ಧ ಗೊಳಿಸಿಕೊಂಡು ಕನ್ಯಾಕುಬ್ಜ ರಾಜ್ಯದಮೇಲೆ ದಂಡೆಯಾತ್ರೆ ಹೊರಟ.

ಕಾನಿಷ್ಕನು ಸೈನ್ಯಸಮೇತನಾಗಿ ತನ್ನ ರಾಜ್ಯದಮೇಲೆ ದಂಡೆತ್ತಿ ಬರುವ ವಿಷಯ ಕನ್ಯಾಕುಬ್ಜದ ರಾಜನಿಗೆ ತಿಳಿಯಿತು. ಬಲಾಢ್ಯನಾದ ಆತನನ್ನು ತಾನು ಎದುರಿಸ ಲಾರೆನೆಂಬುದು ಸ್ಪಷ್ಟವಾಯಿತು. ಹಾಗಾದರೆ ಮುಂದಿನ ಕರ್ತವ್ಯವೇನು?



ರಾಜನು ಬರಲಿರುವ ಉಪದ್ರವವನ್ನು ಮಂತ್ರಿಗೆ ತಿಳಿಸಿ "ಏನಾದರೂ ಉಪಾಯ ಹುಡುಕು" ಎಂದ. ಅದಕ್ಕೆ ಮಂತ್ರಿ "ಮಹಾರಾಜ, ನಾನು ಮೊದಲೇ ಆ ಬಗೆಯ ಕಾಣಿಕೆ ಕಳುಹಿಸಬೇಡಿರೆಂದು ಮನವಿಮಾಡಿ ಕೊಂಡೆ. ನಿದ್ದೆಮಾಡುತ್ತಿದ್ದ ನಾಗರದ ಬಾಲ ವನ್ನು ತುಳಿದಿರುವಿರಿ. ಇದು ನಾವಾಗಿ ತಂದಿಟ್ಟು ಕೊಂಡ ಉಪದ್ರವ" ಎಂದ.

ರಾಜನು ತಲೆಯಾಡಿಸಿ "ಸರಿ, ಆದದ್ದು ಆಗಿಹೋಯಿತು. ಅದಕ್ಕಾಗಿ ಚಿಂತಿಸಿ ಫಲವಿಲ್ಲ. ತಕ್ಷಣ ಯಾವುದಾದರೊಂದು ಉಪಾಯ ಮಾಡದಿದ್ದರೆ ನಮ್ಮ ಪ್ರಾಣಗಳೂ, ರಾಜ್ಯವೂ ಉಳಿಯುವುದಿಲ್ಲ" ಎಂದ ಖಿನ್ನನಾಗಿ. ಆಗ ಮಂತ್ರಿ ಹೇಳಿದ: "ಹಾಗಾದರೆ




ಒಂದು ಮಾತು; ನೀವು ಯಾವ ಪ್ರಶ್ನೆಯನ್ನೂ ಕೇಳದೆ ಈಗಲೇ ನನ್ನ ಕೈಯನ್ನು ಕತ್ತರಿಸುವಂತೆ ಆಜ್ಞಾಪಿಸಿ"

ಮಂತ್ರಿಯ ಕೋರಿಕೆಯನ್ನು ಕೇಳಿ ಕನ್ಯಾಕುಬ್ಜ ರಾಜನಿಗೆ ಕಳವಳ ವುಂಟಾಯಿತು. ಮಂತ್ರಿಯನ್ನು ಈ ರೀತಿ ಅಂಗವಿಕಲನನ್ನಾಗಿ ಮಾಡುವುದು ರಾಜನಿಗೆ ಸ್ವಲ್ಪವೂ ಇಷ್ಟವಿರಲಿಲ್ಲ. ಆದರೆ ಈಗ ಬೇರೆನೂ ಗತ್ಯಂತರವಿಲ್ಲ. ತಳವಾರನನ್ನು ಕರೆಯಿಸಿ ಮಂತ್ರಿಯಯನ್ನು ಕಡಿಸಿಹಾಕಿಸಿದ.

ಒಂದು ವಾರದನಂತರ ಮಂತ್ರಿ ಒಂದು ಉತ್ತಮಾಶ್ವವನ್ನು ಹತ್ತಿ ಕಾನಿಷ್ಕನ ಸೈನ್ಯ ಬರುತ್ತಿದ್ದ ಮಾರ್ಗಕ್ಕೆ ಎದುರಾಗಿ ಹೊರಟ. ಅದು ಕನ್ಯಾಕುಬ್ಜ ರಾಜ್ಯದ ಸರಹದ್ದನ್ನು ಸೇರುವವೇಳೆಗೆ ಸರಿಯಾಗಿ ಈ ಕೈಯಿಲ್ಲದ ಮಂತ್ರಿ ಅವರನ್ನು ಸೇರಿಕೊಂಡ.

"ಮಹಾರಾಜ, ನಾನು ಕನ್ಯಾಕುಬ್ಜ ರಾಜ್ಯದ ಮಂತ್ರಿ. ಆತನು ತಮಗೆ ಮಾಡಿದ ಅವಮಾನವನ್ನು ನಿವಾರಿಸಲು ಮಾಡಿದ ಪ್ರಯತ್ನದ ಫಲ ಅನುಭವಿಸುತ್ತಿರುವೆನು" ಎಂದು ಮಂತ್ರಿ ಕಾನಿಷ್ಕನಿಗೆ ತನ್ನ ತುಂಡು ಗೈಯನ್ನು ತೋರಿಸಿದನು.

ಕಾನಿಷ್ಕನು ಮಂತ್ರಿ ಹೇಳಿದುದನ್ನೆಲ್ಲಾ ಕೇಳಿದ. ತನ್ನ ದೆಸೆಯಿಂದ ಆತನಿಗೆ ಈ ಶಿಕ್ಷೆಯಾಯಿತೆಂದು ಭಾವಿಸಿ, ಹೀಗೆಂದು ಸಮಾಧಾನಮಾಡಿದ:

"ಸರಿ, ಆ ಜಂಭದ ಕೋಳಿಗೆ ಉಚಿತ ಶಿಕ್ಷೆ ವಿಧಿಸುತ್ತೇನೆ. ಇಷ್ಟರಲ್ಲೇ ಅವನನ್ನು ಯಮಸದನಕ್ಕೆ ಕಳುಹಿಸುವೆನು" ಮಂತ್ರಿ ಅಷ್ಟಕ್ಕೇ ಸುಮ್ಮನಾಗಲಿಲ್ಲ.

"ಮಹಾಪ್ರಭೂ, ಪ್ರತೀಕಾರವಾದ ಹೊರತು ನನಗೆ ಮನಶ್ಶಾಂತಿಯಿಲ್ಲ. ತಾವು ದಂಡೆತ್ತಿಬರುವುದನ್ನು ಕೇಳಿ ರಾಜನು ಪಟ್ಟಣದಿಂದ ಪಲಾಯನ ಮಾಡಿದ್ದಾನೆ. ಆತನು ಯಾವಕಡೆ ಹೊರಟಿರುವನೆಂದು ಯಾರಿಗೂ ತಿಳಿಯದು. ಆದುದರಿಂದ ದಾರಿಯನ್ನು ಅಡ್ಡಗಟ್ಟಿ ಹಿಡಿಯಬೇಕು" ಎಂದು ಹೇಳಿದ.

ಕಾನಿಷ್ಕನೂ ಆತನ ಮಾತಿಗೆ ಒಪ್ಪಿ, ಆ ರಾಜನನ್ನು ಈಗ ಹಿಡಿಯಲು ಉಪಾಯ ಹೇಳುವಂತೆ ಮಂತ್ರಿಯನ್ನು ಕೇಳಿದ. ಅದಕ್ಕೆ ಮಂತ್ರಿ, "ಪ್ರಭೂ, ಆತನನ್ನು ಸೆರೆಹಿಡಿಯಲು

ನನಗೆ ಎರಡು ಮಾರ್ಗಗಳಿವೆ. ಒಂದು ಹಾದಿಯಲ್ಲಿ ಹೊರಟರೆ ಸರಿಯಾಗಿ ನಲವತ್ತು ದಿನಗಳಾಗುವುವು. ಇನ್ನೊಂದು ದಾರಿಯಲ್ಲಿ ಹೊರಟರೆ ಗಮ್ಯಸ್ಥಾನವನ್ನು ಒಂದು ವಾರದಲ್ಲೇ ತಲುಪಬಹುದು. ಆದರೆ ಈ ದಾರಿ ಕಂಟಕಮಯವಾದುದು. ಮೈದಾನದಲ್ಲಿ ಪ್ರಯಾಣ ಬೆಳೆಸಬೇಕಾಗುತ್ತದೆ. ಒಂದು ಹನಿ ನೀರೂ ಸಿಗುವಂತಿಲ್ಲ" ಎಂದ.

ಕಾನಿಷ್ಕನು ಸ್ವಲ್ಪ ಹೊತ್ತು ಯೋಚಿಸಿ, ಎರಡನೇ ದಾರಿಯಲ್ಲೇ ಹೋಗಲು ನಿರ್ಧರಿಸಿದ. ಪ್ರಯಾಣ ಒಂದು ವಾರವೇ ಆದರೂ ಹತ್ತು ದಿವಸಗಳಿಗಾಗುವಷ್ಟು ನೀರೂ, ಸಾಂಬಾರಗಳನ್ನು ಅಳವಡಿಸಿಕೊಳ್ಳುವಂತೆ ಆಜ್ಞೆಮಾಡಿದ. ತನ್ನ ಇಡೀ ಸೈನ್ಯದೊಂದಿಗೆ ಮೈದಾನ ಮಾರ್ಗವಾಗಿ ಹೊರಟ.

ಸೈನ್ಯಗಳು ಮೈದಾನ ಪ್ರದೇಶದಲ್ಲಿ ಹೊರಟಿವೆ. ಎಲ್ಲೂ ಗಿಡ ಗಂಟೆಗಳ ಸುಳಿವಿಲ್ಲ. ನೀರಿನ ಗುರುತೇ ಕಾಣಿಸದು. ಹತ್ತು ದಿವಸವಾದರೂ ಗುರಿ ಹತ್ತಿರ ಸಾಗಲಿಲ್ಲ. ಒಂದೆರಡು ದಿನಗಳಾಗಲು ಆಹಾರದ ಮಾತು ಹಾಗಿರಲಿ, ದಣಿವಾರಿಸಿಕೊಳ್ಳಲೂ ನೀರಿಲ್ಲದೆ ಸೈನಿಕರು ತೊಂದರೆಗೊಳಗಾದರು. ಹತ್ತು ದಿವಸಗಳಿಗೆಂದು ತಂದಿದ್ದ ನೀರು ಸಾಂಭಾರ ಪದಾರ್ಥಗಳು ಮುಗಿದು ಹೋದುವು.

ಪರಿಸ್ಥಿತಿ ವ್ಯತಿರೇಕವಾಗಲು ಕಾನಿಷ್ಕನು ಕನ್ಯಾಕುಬ್ಜ ರಾಜನ ಮಂತ್ರಿಯನ್ನು ಕರೆಯಿಸಿ "ಒಂದು ವಾರವೆಂದು ಹೇಳಿ ಹನ್ನೆರಡುದಿನ



ಪ್ರಯಾಣ ಮಾಡಿದರೂ ಗಮ್ಯಸ್ಥಾನವನ್ನು ಸೇರದಿರಲು ಕಾರಣವೇನು?" ಎಂದು ಕೇಳಿದ. ಅದಕ್ಕೆ ಮಂತ್ರಿ ಗಹಗಹಿಸಿ ನಕ್ಕು,

"ಮಹಾರಾಜರೇ, ನಿಮ್ಮನ್ನು ಬೇಕೆಂತಲೆ ಈರೀತಿ ಮೋಸಗೊಳಿಸಿದೆ. ನೀವೇನೋ ನಮ್ಮ ರಾಜನನ್ನು ಯಮಪುರಿಗೆ ಕಳುಹಿಸುವೆನೆಂದು ಹೇಳಿದಿರಿ. ಆದರೆ ಈಗ ನೀವು ಸೈನ್ಯಸಮೇತವಾಗಿ ಯಮಪುರಿಗೆ ಹೋಗಬೇಕಾದ ಸಮಯ ಬಂದಿದೆ. ನೀವು ಹಿಂದಿರುಗಬೇಕೆಂದರೂ, ಮುಂದಕ್ಕೆ ಪ್ರಯಾಣ ಬೆಳೆಸಬೇಕೆಂದರೂ ಹನ್ನೆರಡು ದಿನಗಳಾಗುತ್ತವೆ. ಅಂದರೆ ಎಲ್ಲರೂ ಒಂದುಹನಿ ನೀರಿಲ್ಲದ ಈ ಮೈದಾನದಲ್ಲಿ ಬಾಯಾರಿ ಗಂಟಲೊಣಗಿ ಪ್ರಾಣ ಬಿಡಬೇಕಾಗುತ್ತದೆ. ಇದಕ್ಕೆ ಕಾರಣ

ನಾದ ನನ್ನ ತಲೆಯನ್ನು ಈ ಕ್ಷಣದಲ್ಲೇ ಹಾರಿಸಿದರೂ ಚಿಂತೆಯಿಲ್ಲ. ರಾಜ ಕಾರ್ಯವನ್ನು ನೆರವೇರಿಸಿರುವೆನು" ಎಂದ.

ಈ ನುಡಿಗಳನ್ನುಕೇಳಿದ ಕಾನಿಷ್ಕನು ಸ್ವಲ್ಪ ಹೊತ್ತು ಸ್ತಬ್ಧನಾದ. ಕೂಡಲೇ ಕಿರುನಗೆ ಸೂಸಿ "ಮಂತ್ರೀ, ನಿನ್ನ ರಾಜಭಕ್ತಿಯನ್ನು ಮೆಚ್ಚಿದೆ. ಆದರೆ ಒಂದು ವಿಷಯ ನೀನು ಮರೆತಿರುವಂತೆ ತೋರುವುದು. ನಾನು ದೈವಾಂಶ ಸಂಭೂತನೆಂದು ಹೇಳುವುದು ಕಟ್ಟುಕತೆಯಲ್ಲ. ನೀನೇ ಈಗ ನೋಡುವಿಯಂತೆ" ಎಂದು ಕಾನಿಷ್ಕನು ಅಶ್ವವನ್ನೇರಿ ದೈವದತ್ತವಾದ ಭಲ್ಲೆಯನ್ನು ಹಿಡಿದುಕೊಂಡು ಒಬ್ಬೊಂಟಿಗನಾಗಿ ಹೊರಟ.

ಸ್ವಲ್ಪದೂರ ಒಂದು ಕಡೆ ಬತ್ತಿಹೋಗಿದ್ದ ದೊಡ್ಡದೊಂದು ಕೊಳ ಕಾಣಿಸಿತು. ಕಾನಿಷ್ಕನು ಕುದುರೆಯಿಂದ ಇಳಿದು ಆ ಕೊಳದ ಹತ್ತಿರಕ್ಕೆ ಹೋಗಿ ಕೈಯಲ್ಲಿದ್ದ ಶಕ್ತಿಯಿಂದ ನೆಲವನ್ನು ಒಮ್ಮೆ ಚುಚ್ಚಿದನು. ಮರುಕ್ಷಣವೇ ಅಲ್ಲಿ ತಿಳಿನೀರಿನ ಬುಗ್ಗೆಯೊಂದು ಮುಗಿಲಿನೆತ್ತರಕ್ಕೆ ಚಿಮ್ಮಿತು!

"ಮಂತ್ರಿ, ಈಗ ನೋಡಿದೆಯಾ ನನ್ನ ಶಕ್ತಿಯನ್ನು! ಅನಗತ್ಯವಾಗಿ ಅಂಗವಿಕಲನಾದುದಕ್ಕೆ ನೀನು ಯೋಚಿಸಬೇಕಾಗಿದೆ" ಎಂದ ಕಾನಿಷ್ಕ ಮಂತ್ರಿಯಕಡೆ ನೋಡುತ್ತಾ. ಮಂತ್ರಿ ನಾಚಿಕೆಯಿಂದ ತಲೆ ತಗ್ಗಿಸಿದ. ಕಾನಿಷ್ಕನು ಮತ್ತೆ ಸೈನ್ಯವನ್ನು ಸಜ್ಜುಗೊಳಿಸಿ ಕನ್ಯಾಕುಬ್ಜಕ್ಕೆ ಹೊರಡಲು ಸಿದ್ಧನಾದ.

ಆಗ ಮಂತ್ರಿ: "ಮಹಾರಾಜ, ನೀವು ದೈವಾಂಶವುಳ್ಳವರೆಂದು ನಾನೀಗ ಅರಿತುಕೊಂಡೆ. ನನ್ನಲ್ಲಿ ತಾವು ತೋರಿಸಿದ ಉದಾರತೆ ಸಾಟಿಯಿಲ್ಲದ್ದು. ಇಷ್ಟು ಔದಾರ್ಯವುಳ್ಳವರೂ ದೈವಾಂಶಸಂಭೂತರೂ ಆದ ತಾವು ಇಂಗಿತವರಿಯದ ಒಬ್ಬ ಭೂಪತಿ ಮಾಡಿದ ಅವಮಾನವನ್ನು ಸಹಿಸಲಾರಿರಾ" ಎಂದು ದೈನ್ಯದಿಂದ ಬೇಡಿಕೊಂಡ.

ಕಾನಿಷ್ಕನು "ಅದೂಸರಿಯೇ" ಎಂದು ತಲೆದೂಗಿ, ತನ್ನ ರಾಜಧಾನಿಯಾದ ಪುರುಷಪುರಮಾರ್ಗವನ್ನು ಹಿಡಿಯುವಂತೆ ಸೈನಿಕರಿಗೆ ಸೂಚಿಸಿದ. ಮಂತ್ರಿ ಕಾನಿಷ್ಕನಿಂದ ಅಪ್ಪಣೆ ಪಡೆದು ಕನ್ಯಾಕುಬ್ಜವನ್ನು ಸೇರಿಕೊಂಡ.






# ಯುಕ್ತಿಶಾಲಿ ವಿಪ್ರ

ಒಂದೂರಿನಲ್ಲಿ ವಿಷ್ಣುಶರ್ಮನೆಂಬ ಬ್ರಾಹ್ಮಣನು ಇದ್ದನು. ಆತನು ತೀರಾ ಬಡವನು. ಏನು ಮಾಡಿದರೂ ಆತನ ಬಡತನ ನೀಗಲಿಲ್ಲ. ಆದುದರಿಂದ ಬೇರೆ ದೇಶಕ್ಕೆ ಹೋಗಿ ತನ್ನ ಬುದ್ಧಿವಂತಿಕೆಯಿಂದ ಹಣಗಳಿಸಿಕೊಳ್ಳುವುದು ಉತ್ತಮವೆಂದು ಆತನಿಗೆ ತೋರಿತು. ಪ್ರಯಾಣಕ್ಕೆ ಬೇಕಾಗುವ ಬುತ್ತಿಯನ್ನು ಸಿದ್ಧಪಡಿಸುವಂತೆ ಹೆಂಡತಿಗೆ ಹೇಳಿದ.

ವಿಷ್ಣುಶರ್ಮನ ಹೆಂಡತಿ ಕೊರಳಲ್ಲಿದ್ದ ತಾಳಿಯನ್ನು ಮಾರಿ ಅದಕ್ಕೆ ಬದಲಾಗಿ ಅರಸಿನ ಕೊಂಬು ಕಟ್ಟಿಕೊಂಡು, ಕತ್ತಲೆಯಾದಬಳಿಕ ಶೆಟ್ಟಿಯ ಅಂಗಡಿಗೆ ಹೋಗಿ ತಿಂಡಿ ಮಾಡಲು ಬೇಕಾಗುವ ದಿನಸುಗಳನ್ನು ಕೊಂಡುಕೊಂಡಳು. ಕತ್ತಲೆಯಲ್ಲಿ ಶೆಟ್ಟಿ ಆಕೆಗೆ ಜಾಜಿಕಾಯಿ ಕೊಡುವುದರ ಬದಲಾಗಿ ಪತ್ಯನಾಭವನ್ನು ಕೊಟ್ಟ. ಆಕೆ ನೋಡದೆ ಮನೆಗೆ ತೆಗೆದುಕೊಂಡು ಹೋಗಿ ಉಳಿದ ಪದಾರ್ಥಗಳೊಂದಿಗೆ ಪತ್ಯನಾಭವನ್ನೂ ಅರೆದು ಇಪ್ಪತ್ನಾಲ್ಕು ಒಬ್ಬಟ್ಟುಗಳನ್ನು ಸಿದ್ಧಮಾಡಿ, ಅವುಗಳನ್ನು ಭದ್ರವಾಗಿ ಗಂಟು ಕಟ್ಟಿದಳು. ಮಾರನೆಯದಿನ ಬೆಳಗಿನ ಜಾವದಲ್ಲೇ ಎದ್ದು ಒಬ್ಬಟ್ಟಿನ ಗಂಟನ್ನು ತೆಗೆದುಕೊಂಡು ಶರ್ಮ ಪ್ರಯಾಣ ಮಾಡಿದ.

ಸೂರ್ಯನು ನಡುನೆತ್ತಿಗೆ ಬರುವವೇಳೆಗೆ ಶರ್ಮನು ಬಹುದೂರ ನಡೆದು, ಬಳಲಿ, ಒಂದು ನದಿಯ ಹತ್ತಿರಕ್ಕೆ ಸೇರಿದ. ಆತನು ಒಬ್ಬಟ್ಟಿನ ಗಂಟನ್ನು ನದಿಯ ದಡದಲ್ಲಿಟ್ಟು, ಸ್ನಾನಮಾಡಲು ನದಿಯಲ್ಲಿ ಇಳಿದನು. ಅದೇ ಸಮಯಕ್ಕೆ ಆ ನದಿಯ ದಡಕ್ಕೆ ಇಪ್ಪತ್ನಾಲ್ಕು ಜನ ಕಳ್ಳರು ಬಂದರು. ಹಿಂದಿನ ರಾತ್ರಿ ಅರಮನೆಯಲ್ಲಿ ಕೊಳ್ಳೇಹೊಡೆದ ಹಣ ಮತ್ತು ಒಡವೆಗಳನ್ನು ಕತ್ತೆಗಳಮೇಲೆ ಹೇರಿ ಅವರು ಅಲ್ಲಿಗೆ ಬಂದಿದ್ದರು. ಅವರಿಗೂಸಹ ತುಂಬಾ ಹಸಿವಾಗಿತ್ತು. ಆದುದರಿಂದ ದಡದಮೇಲೆ ಬ್ರಾಹ್ಮಣನು ಇಟ್ಟಿದ್ದ ಒಬ್ಬಟ್ಟಿನ ಗಂಟನ್ನು ಬಿಚ್ಚಿ, ಅದರಲ್ಲಿದ್ದ ಇಪ್ಪತ್ನಾಲ್ಕು ಒಬ್ಬಟ್ಟುಗಳನ್ನೂ ತಲಾ ಒಂದೊಂದು ತಿಂದು ಅಲ್ಲಿಯೇ ಮಲಗಿ ಹಾಗೇ ಮರಣ ಹೊಂದಿದರು.

ಕೆ. ಕೆ. ರಾವ್



ಬ್ರಾಹ್ಮಣನು ಸ್ನಾನ ಮುಗಿಸಿ, ಸಂಧ್ಯಾವಂದನೆಮಾಡಿ, ತಿಂಡಿಯನ್ನು ತಿನ್ನಲು ಬಂದರೆ, ತಿಂಡಿಗೆ ಬದಲಾಗಿ ಸತ್ತುಬಿದ್ದಿರುವ ಕಳ್ಳರೂ, ಅವರು ಕತ್ತೆಗಳಮೇಲೆ ಹೊರಿಸಿಕೊಂಡು ಬಂದಿದ್ದ ಧನರಾಶಿಯೂ ಕಾಣಿಸಿತು. ಆ ಸಂಪತ್ತನ್ನು ಕಂಡು ಬ್ರಾಹ್ಮಣನು ಹಸಿವನ್ನೂ ಮರೆತುಬಿಟ್ಟನು. ಆದರೆ ಅಷ್ಟೊಂದು ಹಣವನ್ನು ಮನೆಗೆ ಹೇಗೆ ಸಾಗಿಸುವುದೋ ಆತನಿಗೆ ಬಗೆಹರಿಯಲಿಲ್ಲ.

ಇಷ್ಟರಲ್ಲಿ ಶರ್ಮನಿಗೆ ಬಹಳ ದೂರದಲ್ಲಿ ರಾಜಭಟರು ಕುದುರೆಗಳಮೇಲೆ ಬರುತ್ತಿರುವುದು ಕಾಣಬಂತು. ಕೂಡಲೇ ಆತನು ಒಂದು ಉಪಾಯ ಮಾಡಿದ. ಕಳ್ಳರ ಹತ್ತಿರವಿದ್ದ ಕತ್ತಿಗಳನ್ನೆಲ್ಲಾ ಸಂಗ್ರಹಮಾಡಿ, ಒಂದು ಕತ್ತಿಯಿಂದ ಸತ್ತುಬಿದ್ದಿರುವ ಕಳ್ಳರ ಮೈಮೇಲೆ ಗಾಯಮಾಡಿ, ಕತ್ತೆಗಳ ಮೇಲಿದ್ದ ಮಾಲನ್ನು ಒಂದುಕಡೆ ಕೂಡಿಹಾಕಿ, ಕತ್ತಿಯನ್ನು ಭುಜದ ಮೇಲಿಟ್ಟುಕೊಂಡು, ಅದರ ಸುತ್ತಲೂ ತಿರುಗಾಡುತ್ತಿದ್ದನು.

ಕೊಂಚ ಹೊತ್ತಿಗೆಲ್ಲಾ ರಾಜಭಟರು ಅಲ್ಲಿಗೆ ಬಂದರು. ಸತ್ತುಬಿದ್ದಿರುವ ಕಳ್ಳರನ್ನೂ, ರಾಶಿ ಬಿದ್ದಿರುವ ಕಳುವಾದ ಮಾಲನ್ನೂ ನೋಡಿ ಆಶ್ಚರ್ಯಚಕಿತರಾದರು. ಅವರು ವಿಷ್ಣುಶರ್ಮನೊಂದಿಗೆ "ಅಯ್ಯಾ, ನಾವು ಭೂರಿಶ್ರವನೆಂಬ ರಾಜನ ಬಂಟರು. ನಿನ್ನೆರಾತ್ರಿ ಈ ಮಾಲನ್ನೆಲ್ಲಾ ಕಳ್ಳರು ನಮ್ಮ ಅರಮನೆಯಿಂದ ಕೊಳ್ಳೆ ಹೊಡೆದರು. ಇವರೆಲ್ಲರನ್ನೂ ಕೊಂದವರು ಯಾರು?" ಎಂದು ಕೇಳಿದರು.

"ಅದೆಲ್ಲವನ್ನೂ ನಿಮ್ಮ ರಾಜನೊಂದಿಗೆ ನಾನೇ ಹೇಳುವೆನು. ಮೊದಲು ಈ ಮಾಲನ್ನು ಜೋಪಾನಮಾಡಿ. ನಡೆಯಿರಿ, ನಿಮ್ಮ ರಾಜನ ಹತ್ತಿರಕ್ಕೆ ಹೋಗುವಾ" ಎಂದ ವಿಷ್ಣುಶರ್ಮ.

ವಿಷ್ಣುಶರ್ಮನನ್ನು ರಾಜಭಟರು ತಮ್ಮ ಅರಸನ ಹತ್ತಿರಕ್ಕೆ ಕರೆದುಕೊಂಡು ಹೋದರು. ಶರ್ಮನು ರಾಜನೊಂದಿಗೆ ತಾನೇ ಆ ಕಳ್ಳರನ್ನೆಲ್ಲಾ ಕೊಂದು, ಕಳೆದುಹೋದ ಮಾಲನ್ನು ಉಳಿಸಿದೆನೆಂದು ಒಗ್ಗಿಸಿ ಹೇಳಿದ.

ಕಳೆದುಹೋಗಿದ್ದ ಮಾಲು ಮತ್ತೆ ಸಿಕ್ಕಿದುದಕ್ಕೆ ರಾಜನು ತುಂಬಾ ಸಂತೋಷಗೊಂಡು "ಇಪ್ಪತ್ನಾಲ್ಕುಜನ ಕಳ್ಳರನ್ನು ಕೊಂದ ನಿಮ್ಮ ಪರಾಕ್ರಮ ಮೆಚ್ಚಿಕೊಳ್ಳುವಂತಹದು. ನಾನು

ನಿಮಗೆ ಯಾವರೀತಿ ಪ್ರತ್ಯುಪಕಾರ ಮಾಡಲಿ?" ಎಂದು ವಿಷ್ಣುಶರ್ಮನನ್ನು ಕೇಳಿದ.

ಅದಕ್ಕೆ ಆ ಬ್ರಾಹ್ಮಣನು "ಮಹಾಪ್ರಭೂ, ನಿಮ್ಮಲ್ಲಿ ಆರುಲಕ್ಷ ಸೈನಿಕರು ಇರುವರೆಂದು ಕೇಳಿರುವೆನು. ಏಕೆ ವ್ಯರ್ಥ? ಅವರು ಕಳ್ಳರನ್ನು ಹಿಡಿಯಲು ಸಮರ್ಥರಾದರೆ? ಅವರಲ್ಲಿ ಎರಡು ಲಕ್ಷ ಜನರನ್ನು ಕೆಲಸದಿಂದ ವಜಾ ಮಾಡಿ ಅವರ ಸಂಬಳ ನನಗೆ ಕೊಡಿಸಿಕೊಡಿ. ನಾನು ನಿಮ್ಮ ನೌಕರಿಯಲ್ಲಿರುವೆನು"

ರಾಜನು ವಿಷ್ಣುಶರ್ಮನು ಹೇಳಿದಂತೆ ಎರಡು ಲಕ್ಷ ಸೈನಿಕರನ್ನು ಕೆಲಸದಿಂದ ತೆಗೆದು ಹಾಕಿ, ಅವರ ಸಂಬಳವನ್ನು ವಿಷ್ಣುಶರ್ಮನಿಗೆ ಕೊಡಿಸಿದ. ಈ ವ್ಯವಸ್ಥೆ ಮಂತ್ರಿಗೆ ಸರಿದೋರಲಿಲ್ಲ. ಆದರೆ ಏನೂ ಮಾಡಲಾರದೆ ಸುಮ್ಮನಿದ್ದ.

ಸ್ವಲ್ಪಕಾಲ ಹೀಗೇ ಕಳೆಯಿತು. ಸುತ್ತಮುತ್ತಲ ಅರಣ್ಯದಲ್ಲಿ ಒಂದು ಭಯಂಕರವಾದ ಸಿಂಹ ನರಮಾಂಸದ ರುಚಿಕಂಡು, ರಾತ್ರಿಯ ಹೊತ್ತು ಪಟ್ಟಣದೊಳಕ್ಕೆ ಪ್ರವೇಶಿಸಿ, ಅನೇಕರನ್ನು ಕೊಲ್ಲುತಿತ್ತು. ಅದನ್ನು ಕೊಲ್ಲಲು ಭಟರನ್ನು ಕಳುಹಿಸಲು ರಾಜನು ನಿಶ್ಚಯಿಸಿದನು. ಆದರೆ ವಿಷ್ಣುಶರ್ಮನಮೇಲೆ ಕೋಪದಿಂದಿದ್ದ ಮಂತ್ರಿ "ಪ್ರಭೂ, ಎರಡು ಲಕ್ಷ ಸೈನಿಕರ ಸಮಾನರಾದ ನಮ್ಮ ವಿಷ್ಣುಶರ್ಮರಿರುವಾಗ ಸಿಂಹವನ್ನು ಸಾಯಿಸಲು ಬೇರೊಬ್ಬರನ್ನು ಕಳುಹಿಸುವುದೇಕೆ?" ಎಂದ.

"ಆ ಸಿಂಹವನ್ನು ಕೊಲ್ಲಲು ನನಗೆ ಅಪ್ಪಣೆ ಕೊಡಿ" ಎಂದ ಅಲ್ಲಿಯೇ ಇದ್ದ ವಿಷ್ಣುಶರ್ಮ.






ರಾಜನು ಅದೇ ಸರಿಯೆಂದು ಆಜ್ಞೆ ಮಾಡಿದ. ಆ ಸಾಯಂಕಾಲವೇ ವಿಷ್ಣುಶರ್ಮನು ಕಳ್ಳರ ಹತ್ತಿರದಿಂದ ಸಂಗ್ರಹಿಸಿದ್ದ ಇಪ್ಪತ್ನಾಲ್ಕು ಕತ್ತಿಗಳನ್ನೂ ತೆಗೆದುಕೊಂಡು, ಊರಾಚೆ ಬಂದು, ಸಿಂಹವು ಬರುವ ಮಾರ್ಗದಲ್ಲಿದ್ದ ಒಂದು ಮರವನ್ನು ಹತ್ತಿ ಕುಳಿತುಕೊಂಡ. ಕತ್ತಲಾದ ಕೊಂಚಸಮಯಕ್ಕೆಲ್ಲಾ ಸಿಂಹವು ಅತಿಭಯಂಕರವಾಗಿ ಘರ್ಜಿಸುತ್ತಾ ಮೃತ್ಯು ದೇವತೆಯಂತೆ ಆ ದಾರಿಯಲ್ಲೇ ಬಂದಿತು.

ಮರದಮೇಲಿದ್ದ ವಿಷ್ಣುಶರ್ಮ ಬೇಕೆಂತಲೇ ಅದನ್ನು ಸ್ವಲ್ಪ ಕೆಣಕಿದ. ಮರದಮೇಲಿದ್ದ ಶರ್ಮನನ್ನು ಕಂಡಕೂಡಲೇ ಸಿಂಹ ಮತ್ತಷ್ಟು ಭಯಂಕರವಾಗಿ ಘರ್ಜಿಸುತ್ತಾ ಮರದಕೆಳಗೆ ಬಂದು ಬಾಯಿ ತೆರೆದು ಆರ್ಭಟಿಸ ತೊಡಗಿತು. ಶರ್ಮನು ಗುರಿನೋಡಿ ಒಂದು ಕತ್ತಿಯನ್ನು ಸಿಂಹದ ಬಾಯೊಳಕ್ಕೆ ಎಸೆದ. ಇದೇ ರೀತಿ ತನ್ನ ಹತ್ತಿರವಿದ್ದ ಇಪ್ಪತ್ಮೂರು ಕತ್ತಿಗಳನ್ನೂ ಸಿಂಹದ ದೇಹದಮೇಲೆ ಒಂದಾದ ಮೇಲೊಂದು ಎಸೆದ. ಸ್ವಲ್ಪ ಹೊತ್ತಿಗೆಲ್ಲಾ ಸಿಂಹವು ಪ್ರಾಣವನ್ನು ತೊರೆಯಿತು. ಅದು ಮರಣಿಸಿತೆಂದು ದೃಢವಾದ ಕೂಡಲೇ ಶರ್ಮನು ಮರದಿಂದ ಕೆಳಕ್ಕೆ ಇಳಿದು ಬಂದು ಅದರ ಮೈಮೇಲೆ ಸಿಕ್ಕಿಕೊಂಡಿದ್ದ ಕತ್ತಿಗಳನ್ನು ಕಿತ್ತು, ಅದರ ಶರೀರದ ಅನೇಕ ಭಾಗಗಳಲ್ಲಿ ತಿವಿದು, ಅದರ ರಕ್ತವನ್ನು ತನ್ನ ಶರೀರಕ್ಕೆ ಬಳಿದುಕೊಂಡು, ಕತ್ತಿಯನ್ನು ಭುಜದಮೇಲಿಟ್ಟುಕೊಂಡು ಬೆಳಗಾಗುವವರೆವಿಗೂ ಅಲ್ಲೇ ಶತಪಥ ಹಾಕುತ್ತಿದ್ದ. ಮಾರನೆಯದಿನ ರಾಜಭಟರು ಬಂದು ವಿಷ್ಣುಶರ್ಮನನ್ನೂ, ಸತ್ತು ಬಿದ್ದಿರುವ ಸಿಂಹವನ್ನೂ ನಗರದಲ್ಲೆಲ್ಲಾ ಮೆರವಣಿಗೆ ಮಾಡಿದರು.

ರಾಜನು ವಿಷ್ಣುಶರ್ಮನನ್ನು ಗಟ್ಟಿಯಾಗಿ ಅಪ್ಪಿಕೊಂಡು "ನಿನ್ನಪರಾಕ್ರಮಕ್ಕೆ ಸಾಟಿಯೇ ಇಲ್ಲ. ನಿನಗೆ ನಾನು ಯಾವ ಉಪಕಾರ ಮಾಡಬಲ್ಲೆ?" ಎಂದು ಕೇಳಿದ.

"ರಾಜನೇ, ನಾನು ಎರಡು ಲಕ್ಷ ಸೈನಿಕರಿಗೆ ಸಮಾನನೆಂದು ಮಂತ್ರಿಯುವರು ಅಪ್ಪಣೆ ಕೊಡಿಸಿದರು. ಅದು ನಿಜವಲ್ಲ. ನಾನು ನಾಲ್ಕು ಲಕ್ಷ ಸೈನಿಕರಿಗೆ ಸಮಾನನು. ಆದುದರಿಂದ ಮತ್ತೆರಡು ಲಕ್ಷ ಸೈನಿಕರನ್ನು ತೆಗೆದುಹಾಕಿ ಅವರ ಸಂಬಳ ಸಾರಿಗೆಗಳನ್ನು ನನಗೆ ಕೊಡಿಸಿ

ಕೊಡಬೇಕು" ಎಂದ ವಿಷ್ಣುಶರ್ಮ. ರಾಜನು ಆದೇರೀತಿ ಮಾಡಿದ. ಮಂತ್ರಿಗೆ ವಿಷ್ಣುಶರ್ಮನಲ್ಲಿ ವಿಪರೀತ ಕೋಪಬಂತು. ಆದರೆ ಆತನು ಏನೂ ಮಾಡುವಂತಿರಲಿಲ್ಲ.

ಭೂರಿಶ್ರವನು ಕೆಲಸದಿಂದ ತೆಗೆದುಹಾಕಿದ ಸೈನಿಕರು ನೆರೆರಾಜನ ಹತ್ತಿರಕ್ಕೆ ಹೋಗಿ ಅಲ್ಲಿ ನೌಕರಿಗೆ ಸೇರಿದರು. ಅವರು ತಮ್ಮ ಹೊಸ ರಾಜನೊಂದಿಗೆ "ಮಹಾರಾಜರೇ, ಭೂರಿಶ್ರವನು ಈಗ ಬಲಹೀನನಾಗಿರುವನು. ಆತನ ಹತ್ತಿರ ಕೇವಲ ಎರಡುಲಕ್ಷ ಸೈನಿಕರಿದ್ದಾರೆ. ಆತನಮೇಲೆ ದಂಡೆತ್ತಿಹೋಗಿ ಆ ರಾಜ್ಯವನ್ನು ನಿಮ್ಮ ಕೈವಶ ಮಾಡಿಕೊಳ್ಳಲು ಇದೀಗ ಸುಸಮಯ" ಎಂದು ಪ್ರೋತ್ಸಾಹಿಸಿದರು. ಅವರ ಸಲಹೆಯಂತೆಯೇ ಆ ರಾಜನು ತನ್ನ ಸೈನ್ಯವನ್ನೆಲ್ಲಾ ಜೊತೆ ಮಾಡಿಕೊಂಡು ಬಂದು ಮೈದಾನದಲ್ಲಿ ಬೀಡುಬಿಟ್ಟು, ಭೂರಿಶ್ರವನಿಗೆ ಯುದ್ಧಕ್ಕೆ ಆಹ್ವಾನ ಕಳುಹಿಸಿದನು.

ರಾಜನು ಮಂತ್ರಿಯ ಸಲಹೆ ಕೇಳಿದ.

"ಮಹಾಪ್ರಭೂ, ಈ ವಿಷಮ ಪರಿಸ್ಥಿತಿಯಲ್ಲಿ ನಾನು ಸಲಹೆ ಕೊಡಲು ಅಸಮರ್ಥನು. ವಿಷ್ಣುಶರ್ಮನನ್ನು ನಂಬಿ ನಾಲ್ಕುಲಕ್ಷ ಸೈನಿಕರನ್ನು ಕೆಲಸದಿಂದ ತೆಗೆದುಹಾಕಿದಿರಿ. ಆತನ ಸಲಹೆಯನ್ನೇ ಕೇಳಿ" ಎಂದ ಮಂತ್ರಿ.

ರಾಜನು ಶರ್ಮನ ಸಲಹೆ ಕೇಳಿದ. ಶರ್ಮನು ಹೆದರದೆ "ನೀವು ಶತ್ರುಸೈನ್ಯವನ್ನು ಕುರಿತು ಯೋಚಿಸಬೇಡಿ. ಇಂದು ರಾತ್ರಿಯೇ ನಾನು ಆ ಸೈನ್ಯವನ್ನು ಧ್ವಂಸ ಮಾಡುವೆನು" ಎಂದು ರಾಜನಿಗೆ ಅಭಯವನ್ನಿತ್ತನು.



ಮುಂದೆ ಸ್ವಲ್ಪಹೊತ್ತಿನಮೇಲೆ ಹೊತ್ತು ಮುಳುಗಿ ರಾತ್ರಿಯಾಯಿತು. ಶರ್ಮನು ತನ್ನ ಕತ್ತಿಗಳನ್ನೂ, ತಾನು ಕೊಂದ ಸಿಂಹದ ಚರ್ಮವನ್ನೂ ತೆಗೆದುಕೊಂಡು ಒಬ್ಬೊಂಟಿಗ ನಾಗಿ ಮೈದಾನದಲ್ಲಿ ಬಿಡಾರ ಹಾಕಿದ್ದ ಶತ್ರು ಸೈನ್ಯದಕಡೆಗೆ ಹೊರಟನು. ಸೈನಿಕರೆಲ್ಲಾ ಗಾಢನಿದ್ದೆಯಲ್ಲಿ ಮುಳುಗಿದ್ದರು. ಒಂದು ಕಡೆ ಆನೆಗಳನ್ನು ಕಟ್ಟಿಹಾಕಿದ್ದರು.

ವಿಷ್ಣುಶರ್ಮನು ಆ ಆನೆಗಳ ನಡುವೆ ತನ್ನ ಹತ್ತಿರವಿದ್ದ ಸಿಂಹದ ಚರ್ಮವನ್ನು ಎಸೆದನು. ಸಿಂಹವು ತಮ್ಮ ನಡುವೆ ನುಗ್ಗಿತೆಂದು ಬೆದರಿ, ಆನೆಗಳು ತಮ್ಮ ಸರಪಳಿಗಳನ್ನು ಕಿತ್ತು ಕೊಂಡು, ಘೀಂಕಾರ ಮಾಡುತ್ತಾ ಓಡಿದವು. 'ಹೊಡಿ, ಬಡಿ, ಕೊಲ್ಲು' ಎಂದು ವಿಷ್ಣು ಶರ್ಮನು ಕತ್ತಲಲ್ಲಿ ಅರಚಲು ಪ್ರಾರಂಭಿ ಸಿದನು. ಕಿರಿಚಾಟ, ಆನೆಗಳ ಘೀಂಕಾರ ಗಳನ್ನು ಕೇಳಿ ನಿದ್ದೆಯಿಂದ ಎಚ್ಚೆತ್ತ ಸೈನಿಕರು ತಮ್ಮಮೇಲೆ ಅರ್ಧರಾತ್ರಿ ಸಮಯದಲ್ಲಿ ಶತ್ರು ಸೈನ್ಯವು ಬಿದ್ದಿರುವುದೆಂದು ಭಾವಿಸಿ ಒರೆಯಿಂದ ಖಡ್ಗಗಳನ್ನು ತೆಗೆದುಕೊಂಡು ತಮ್ಮತಮ್ಮಲ್ಲೇ ಕಾದಾಡಿ ಸಾಯುತ್ತಿದ್ದರು. ದೊಡ್ಡ ಗಡಿಬಿಡಿ ಯಾಯಿತು. ಈ ಗಲಭೆಯಲ್ಲಿ ಶರ್ಮನು ಶತ್ರು ರಾಜನ ಗುಡಾರವನ್ನು ಹೊಕ್ಕು ಒಬ್ಬೊಂಟಿಗ ನಾಗಿದ್ದ ರಾಜನನ್ನು ತಿವಿದು ಕೊಂದನು.

ಬೆಳಗಾಗುವ ವೇಳೆಗೆ ಆ ಮೈದಾನವೆಲ್ಲಾ ಮರಣಭೂಮಿಯಾಗಿತ್ತು. ಇಂತಹ ಅಖಂಡ ವಿಜಯವನ್ನು ಸಂಪಾದಿಸಿದ ವಿಷ್ಣುಶರ್ಮ ನನ್ನು ನೋಡಿ ರಾಜನ ಆನಂದಕ್ಕೆ ಪಾರವೇ ಇಲ್ಲ. "ನಾನು ನಿನಗೆ ಯಾವ ಉಪಕಾರ ಮಾಡಲಿ?" ಎಂದು ರಾಜನು ವಿಷ್ಣುಶರ್ಮ ನನ್ನು ಕೇಳಿದ.

ಆಗ ವಿಷ್ಣುಶರ್ಮನು ವಿನಯದಿಂದ,

"ಮಹಾಪ್ರಭೂ, ಆಪತ್ಸಮಯದಲ್ಲಿ ಸರಿ ಯಾದ ಸಲಹೆ ಕೊಡಲಾರದ ಮಂತ್ರಿ ಏಕೆ? ನಿಮ್ಮ ಮಂತ್ರಿಯನ್ನು ತೆಗೆದುಹಾಕಿ, ಆ ಪದವಿಯನ್ನು ನನಗೆ ಕೊಡಿಸಿ" ಎಂದ.

ರಾಜನು ಮರು ಮಾತನಾಡದೆ ವಿಷ್ಣು ಶರ್ಮನನ್ನು ಮುಖ್ಯಮಂತ್ರಿಯನ್ನಾಗಿ ನೇಮಿ ಸಿದನು. ಉಪಾಯ ಬಲವನ್ನು ಮೀರಿಸು ವಂತಹ ಬಲವು ಬೇರೊಂದಿಲ್ಲ.






# ಮೂರು ಕೊಂಬಿನ ಮಾವಿನ ಮರ

ಬಹಳಕಾಲದ ಹಿಂದೆ ಕಾವೇರಿನದಿ ತೀರದ ಒಂದು ಅರಣ್ಯಕ್ಕೆ ಸಮೀಪದಲ್ಲಿ ಮೂವರು ಅಣ್ಣತಮ್ಮಂದಿರು ಒಂದು ಕುಟೀರದಲ್ಲಿ ವಾಸ ಮಾಡುತ್ತಿದ್ದರು. ಅವರು ಹುಟ್ಟು ದರಿದ್ರರು. ಅವರಿಗಿದ್ದ ಆಸ್ತಿ ಎಂದರೆ ಒಂದೇ ಒಂದು ಮಾವಿನ ಮರ. ಅದಕ್ಕೆ ಮೂರು ಕೊಂಬೆಗಳಿದ್ದವು. ಆ ಮಾವಿನಮರ ವಸಂತಋತುವಿನಲ್ಲಿ ಚೆನ್ನಾಗಿ ಚಿಗುರಿ, ಬೇಸಿಗೆಯಲ್ಲಿ ಹೇರಳವಾಗಿ ಹಣ್ಣುಬಿಡುತ್ತಿತ್ತು. ಮೂರು ಕೊಂಬೆಗಳ ಫಲಗಳನ್ನು ಮೂವರು ಸಹೋದರರೂ ಕಿತ್ತು, ಅವುಗಳನ್ನು ಮಾರಿ, ವರ್ಷವೆಲ್ಲಾ ಹೇಗೋ ಒಂದುರೀತಿ ಜೀವಿಸುತ್ತಿದ್ದರು.

ಒಂದು ವರ್ಷ ಮೂರು ಕೊಂಬೆಗಳೂ ಚೆನ್ನಾಗಿ ಚಿಗುರಿದ್ದವು. ಕಾಯಿಗಳು ಹಣ್ಣಾಗುವವರೆಗೂ ದಿನಕ್ಕೊಬ್ಬರಂತೆ ಅಣ್ಣತಮ್ಮಂದಿರು ಕಾವಲು ಕಾಯುವರು. ಆ ಪ್ರಕಾರವೇ ಒಂದು ಬೆಳದಿಂಗಳರಾತ್ರಿ ಹಿರಿಯವನು ಕಾವಲು ಕಾಯುತ್ತಿದ್ದ ಸಮಯದಲ್ಲಿ ಒಬ್ಬ ಬಡಮುದುಕನು ಅಲ್ಲಿಗೆ ಬರುತಿದ್ದ. ಕೋಲಿನ ಸಹಾಯದಿಂದ ಮೆಲ್ಲ ನಡೆಯುತ್ತಾ ಅವನು ಮರದ ಸಮೀಪಕ್ಕೆ ಬಂದು ನಿಂತನು.

"ಧರ್ಮಾತ್ಮನೇ, ಹಸಿವು ನನ್ನನ್ನು ದಹಿಸುತ್ತಿದೆ. ತಿನ್ನಲು ಏನಾದರೂ ಕೊಡು, ನಿನಗೆ ಪುಣ್ಯವಿರುತ್ತದೆ" ಎಂದ ಆ ವೃದ್ಧ.

ಕಾವಲಿದ್ದ ಹಿರಿಯವನಿಗೆ ಏನು ಮಾಡಲೂ ತೋರಲಿಲ್ಲ. "ಅಜ್ಜ, ನಾನೂ ನಿಮ್ಮಂತೆಯೇ ದರಿದ್ರ. ಆದರೆ ನೀನು ಹಸಿವಿನಿಂದ ಇರುವೆಯಾದಕಾರಣ ಈ ಕೊಂಬೆಗೆ ಸೇರಿದ ಫಲಗಳನ್ನು ಕಿತ್ತುಕೊಂಡು ತಿಂದು ನಿನ್ನ ಹಸಿವನ್ನು ನೀಗಿಸಿಕೋ. ಈ ಕೊಂಬೆ ನನಗೆ ಸೇರಿದ್ದು" ಎಂದ ಕಾವಲಿದ್ದ ಹಿರಿಯುವ.

ವೃದ್ಧನು ತನ್ನ ಕೋಲಿನಿಂದ ಹಿರಿಯುವನಿಗೆ ಸೇರಿದ ಕೊಂಬೆಯಿಂದ ಕೆಲವು ಹಣ್ಣುಗಳನ್ನು ಕೆಡವಿ, ಅವುಗಳನ್ನುಂಡು, "ಪ್ರಾಣ ಉಳಿಸಿದೆ ತಮ್ಮಾ" ಎಂದು ಹೇಳಿ ತೃಪ್ತನಾಗಿ ತನ್ನದಾರಿ ಹಿಡಿದು ಹೋದ.

ಮಾರನೆಯದಿನ ಎರಡನೆಯವನು ಕಾವಲು ಕಾಯುತ್ತಿದ್ದ ಸಮಯದಲ್ಲಿ ಅದೇ ವೃದ್ಧನು

ಡಿ. ಸುಬ್ರಹ್ಮಣ್ಯ



ಮತ್ತೆ ಬಂದ. ಹಸಿವಾಗಿದೆ ಎಂದ. ಎರಡನೆಯವನೂಸಹ ತನ್ನ ಕೊಂಬೆಗೆ ಸೇರಿದ ಹಣ್ಣುಗಳನ್ನು ಆ ಮುದುಕನಿಗೆ ಕೊಟ್ಟ.

ಮೂರನೆಯ ದಿನ ರಾತ್ರಿ ಯಥಾಪ್ರಕಾರ ಮುದುಕನು ಕಿರಿಯವನ ಕೊಂಬೆಗೆ ಸೇರಿದ ಹಣ್ಣುಗಳನ್ನು ತಿಂದು ಹೊರಟುಹೋದ.

ನಾಲ್ಕನೆಯದಿನ ಬೆಳಗ್ಗೆ ಅಣ್ಣತಮ್ಮಂದಿರು ಮೂವರೂ ಗುಡಿಸಲಿನಲ್ಲಿರುವ ಸಮಯ ನೋಡಿ ವೃದ್ಧನು ಅವರ ಹತ್ತಿರಕ್ಕೆ ಹೋದನು.

"ಮಕ್ಕಳೇ, ನೀವು ಮೂರುಜನರು ದಯಾಶೀಲರು. ನಿಮ್ಮ ಋಣ ಇಟ್ಟುಕೊಳ್ಳುವುದು ನನಗೆ ಇಷ್ಟವಿಲ್ಲ. ನನ್ನೊಂದಿಗೆ ಬನ್ನಿ. ನಿಮಗೆ ಪ್ರತ್ಯುಪಕಾರ ಮಾಡುವೆನು" ಎಂದ ವೃದ್ಧ.

ಸಹೋದರರು ಸಂತೋಷದಿಂದ ವೃದ್ಧನ ಸಂಗಡ ಹೊರಟರು. ಅವರು ಒಂದು ನದಿಯ ತೀರಕ್ಕೆ ಬಂದರು. ಅಲ್ಲಿ ವೃದ್ಧನು ಹಿರಿಯವನನ್ನು ಕುರಿತು "ಮಗೂ, ನಿನಗೇನುಬೇಕೋ ಕೋರಿಕೊ" ಎಂದು ಕೇಳಿದ.

"ಈ ನದಿಯ ನೀರೆಲ್ಲಾ ಕ್ಷೀರವಾಗಿ, ಆ ಹಾಲೆಲ್ಲಾ ನನ್ನ ಸೊತ್ತು ಆದರೆ ನನಗೇನು ಕೊರತೆ" ಎಂದ ಹಿರಿಯವ.

"ಹಾಗೆಯೇ ಆಗಲಿ" ಎಂದ ವೃದ್ಧ.

ಮರುಕ್ಷಣವೇ ನದಿಯ ನೀರೆಲ್ಲಾ ಕ್ಷೀರವಾಗಿ ಬದಲಾಯಿಸಿತು. ಆ ಹಾಲಿಗಾಗಿ ಎಲ್ಲೆಲ್ಲಿಂದಲೋ ಜನ ಬರತೊಡಗಿದರು. ಹಿರಿಯವನು ಅಲ್ಲೇ ನಿಂತುಬಿಟ್ಟ.

ಉಳಿದಿಬ್ಬರು ಸಹೋದರರೊಂದಿಗೆ ವೃದ್ಧನು ಅರಣ್ಯವನ್ನು ಪ್ರವೇಶಿಸಿದನು. ಕಾಡಿನ ನಡುವೆ ಬಂದಾಗ ವೃದ್ಧನು ಎರಡನೆಯವನನ್ನು ಕುರಿತು "ನಿನಗೇನು ಬೇಕು, ಮಗೂ" ಎಂದು ಕೇಳಿದ.

"ಈ ಅಡವಿ ಪ್ರದೇಶವೆಲ್ಲಾ, ಫಲವತ್ತಾದ ಹೊಲವಾಗಿ, ಅದು ನನ್ನದಾದರೆ, ನನಗೆ ಮತ್ತೇನೂ ಬೇಡ" ಎಂದ ಎರಡನೆಯವನು.

"ಹಾಗೆಯೇ ಆಗಲಿ" ಎಂದ ಮುದುಕ.

ಮರುಕ್ಷಣವೇ ಅರಣ್ಯ ಮಾಯವಾಯಿತು. ದೃಷ್ಟಿಗೆ ಗೋಚರಿಸುವಷ್ಟುದೂರ ಹಚ್ಚನೆಯ ಪೈರಿರುವ ಹೊಲ ಕಾಣಿಸಿತು. ಎರಡನೆಯವನು ಸಂತೋಷದಿಂದ ಅಲ್ಲೇ ನಿಂತುಬಿಟ್ಟ.

ಮೂರನೆಯವನನ್ನು ಸಂಗಡ ಕರೆದುಕೊಂಡು ಕೊಂಚದೂರ ಹೋಗಿ ವೃದ್ಧನು

"ಅಣ್ಣಾ ನಿನ್ನ ಕೋರಿಕೆ ಏನು?" ಎಂದು ಕೇಳಿದ. "ನನಗೆ ನೀತಿವಂತಳಾದ ಮಡದಿ ಬೇಕು" ಎಂದ ಮೂರನೆಯವ.

"ಹಾಗಾದರೆ ನನ್ನ ಸಂಗಡ ಬಾ" ಎಂದು ವೃದ್ಧನು ಮುಂದಕ್ಕೆ ನಡೆದ. ಹೋಗಿಹೋಗಿ ಅವರು ಒಬ್ಬ ರಾಜನ ಅಂತಃಪುರವನ್ನು ಸೇರಿದರು. ನೆಟ್ಟಗೆ ಒಳಗೆ ಪ್ರವೇಶ ಮಾಡಿದರು.

ಬಂಗಾರದ ತೂಗುಯ್ಯಾಲೆಯಲ್ಲಿ ರಾಜನು ರಾಣಿ ಮತ್ತು ರಾಜಕುಮಾರಿಯರೊಂದಿಗೆ ಕುಳಿತಿದ್ದನು. ವೃದ್ಧನು ರಾಜನನ್ನು ಕುರಿತು "ರಾಜನೇ ನಿನ್ನ ಮಗಳನ್ನು ಈ ಯುವಕನಿಗೆ ಕೊಟ್ಟು ಮದುವೆ ಮಾಡು" ಎಂದು ಹೇಳಿದ.

ಅದಕ್ಕೆ ರಾಜನು "ಅಯ್ಯಾ, ಈಗಾಗಲೇ ನನ್ನ ಮಗಳನ್ನು ಮದುವೆಯಾಗಲು ಇಬ್ಬರು ರಾಜಕುಮಾರರು ಪೈಪೋಟಿ ನಡೆಸುತ್ತಿದ್ದಾರೆ. ಅವರಲ್ಲಿ ಯಾರಿಗೆ ಕೊಡಬೇಕೋ ತಿಳಿಯದಾಗಿದೆ. ಪರಿಸ್ಥಿತಿ ಹೀಗಿರುವಲ್ಲಿ ಆ ರಾಜಕುಮಾರನನ್ನು ಕಡೆಗೆಣಿಸಿ ಈ ದರಿದ್ರನಿಗೆ ಹೇಗೆ ಕೊಡಲಿ? ನೀವೇ ಹೇಳಿ" ಎಂದ.

"ರಾಜನೇ, ನೀನು ತಪ್ಪು ತಿಳಿದಿರುವೆ. ನಿನ್ನ ಮಗಳಿಗೆ ಆ ರಾಜಕುಮಾರರಿಗಿಂತಲೂ ಈತನೇ ತಕ್ಕವರನು. ಬೇಕಾದರೆ ನಿನಗೆ ರುಜುವಾತು ಮಾಡಬಲ್ಲೆ. ಇಂದೇ ಆ ಇಬ್ಬರು ರಾಜಕುಮಾರರ ಹೆಸರಿನಲ್ಲೂ, ಈ ಯುವಕನ ಹೆಸರಿನಲ್ಲೂ ಮೂರು ಮಾವಿನ ಓಟೆಗಳನ್ನು ನಾಟಿಸು. ನಾಳೆ ಈ ಸಮಯಕ್ಕೆ ಯಾವ ಓಟೆ ಮರವಾಗಿ ಹಣ್ಣು ಬಿಡುವುದೋ ಆತನಿಗೆ



ನಿನ್ನ ಮಗಳನ್ನು ಕೊಟ್ಟು ಮದುವೆಮಾಡು" ಎಂದು ಹೇಳಿದ ಆ ವೃದ್ಧ.

ಒಂದು ದಿನದಲ್ಲಿ ಮಾವಿನ ಓಟೆ ಮರವಾಗಿ ಹಣ್ಣು ಬಿಡುವುದು ಅಸಾಧ್ಯವೆಂದು ರಾಜನಿಗೆ ತೋರಿತು. ಆದರೂ ವೃದ್ಧನು ಹೇಳಿದಂತೆ ಮಾಡಿದ. ಮಾರನೆಯದಿನ ಮೂರನೇ ಯುವಕನ ಹೆಸರಿನಲ್ಲಿ ನಾಟಿದ ಓಟೆ ಮೊಳಕೆಯಾದುದಲ್ಲದೆ ಮರವಾಗಿ ಹಣ್ಣೂ ಸಹ ಬಿಟ್ಟಿತು!

ಒಪ್ಪಂದಕ್ಕೆ ಕಟ್ಟುಬಿದ್ದು, ರಾಜನು ತನ್ನ ಮಗಳನ್ನು ಕಿರಿಯವನಿಗೆ ಕೊಟ್ಟು ವಿವಾಹ ಮಾಡಿದ. ವೃದ್ಧನು ತನ್ನ ಋಣ ತೀರಿತೆಂದುಕೊಂಡು ತನ್ನ ಹಾದಿ ಹಿಡಿದ.

ರಾಜನು ಮಾತು ತಪ್ಪಲಾರದೆ ತನ್ನ ಮಗಳನ್ನು ಹುಟ್ಟು ದರಿದ್ರನಿಗೆ ಕೊಟ್ಟು ಮದುವೆ



ಮಾಡಿದುದೇನೋ ಉಂಟು. ಆದರೆ ಆತನಿಗೆ ತನ್ನ ಅಳಿಯನನ್ನು ಕಂಡು ಅವಮಾನವಾಗಿತ್ತು. ಆದುದರಿಂದ ಮೂರು ದಿನ ಕಳೆದ ಮೇಲೆ ರಾಜನು ತನ್ನ ಮಗಳು ಮತ್ತು ಅಳಿಯನನ್ನು ತನ್ನ ರಾಜ್ಯದಿಂದ ಹೊರಗಟ್ಟಿದ.

ಅವರಿಬ್ಬರೂ ಕಾಲು ನಡಿಗೆಯಿಂದ ತಮ್ಮ ಹಳೇ ಕುಟೀರಕ್ಕೆ ಬಂದು ಸೇರಿ ಬಡತನವನ್ನು ಅನುಭವಿಸುತ್ತಿದ್ದರು.

ಹೀಗೇ ಒಂದು ವರ್ಷ ಕಳೆಯಿತು.

ನದಿಯ ತೀರದಲ್ಲಿ ಹಿರಿಯವನು ಭಾರೀ ಭಾರಿ ಮಹಡಿ ಮನೆಗಳನ್ನು ಕಟ್ಟಿಸಿದ. ಹಾಲು ದೂರದ ಗ್ರಾಮಗಳಿಗೂ ಪೀಪಾಯಿಗಳಲ್ಲಿ ರವಾಣೆಯಾಗುತಲಿತ್ತು. ನೂರಾರು ಜನ ಆತನ ಕೈಕೆಳಗೆ ಕೆಲಸ ಮಾಡುತ್ತಿದ್ದರು. ಮೊಸರು ಮತ್ತು ಬೆಣ್ಣೆಗಳ ವ್ಯಾಪಾರ ಬಿರುಸಾಗಿ ನಡೆಯುತ್ತಿತ್ತು. ಒಂದು ದಿನ ಹಿರಿಯವನ ಹತ್ತಿರಕ್ಕೆ ಒಬ್ಬ ಮುದುಕನು ಬಂದ. ಹಿರಿಯವನು ಹತ್ತಿರದಲ್ಲೇ ಇದ್ದ ನದಿಯಿಂದ ಹಾಲು ಅಳೆಯಿಸಿ ಪೀಪಾಯಿಗಳಲ್ಲಿ ತುಂಬಿಸುತಿದ್ದ. ಆಗ ಆ ಮುದುಕನು

"ಸ್ವಾಮೀ, ಬಾಯಿ ಒಣಗಿಹೋಗಿದೆ. ಹಸಿವು ದಹಿಸುತ್ತಿದೆ. ಒಂದಿಷ್ಟು ಹಾಲು ಕುಡಿಯಲು ಕೊಡಿಸಿಕೊಡಿ" ಎಂದು ದೈನ್ಯದಿಂದ ಬೇಡಿದ.

ಹಿರಿಯವನು ಮುದುಕನ ಕಡೆ ಕೋಪದಿಂದ ನೋಡಿದ. ಆತನು ವೃದ್ಧನನ್ನು ಗುರುತಿಸದೆ, "ಹೀಗೆ ಎಲ್ಲರಿಗೂ ಹಾಲು ಹಂಚಿದರೆ ನನ್ನ ವ್ಯಾಪಾರ ಸಾಗಿದಂತೆಯೇ! ನಡಿ, ಇಲ್ಲಿಂದ ನಡಿ" ಎಂದು ಗದರಿಸಿದ.

ಮರುಕ್ಷಣವೇ ನದಿಯ ಹಾಲು ನೀರಾಯಿತು. ಅಲ್ಲಿ ಎದ್ದಿದ್ದ ಉಪ್ಪರಿಗೆ ಮನೆಗಳು ಮಾಯವಾದವು. ಮಾರನೆಯದಿನ ಎರಡನೇಯವನು ತನ್ನ ಹೊಲದಲ್ಲಿ ಧಾನ್ಯವನ್ನು ರಾಶಿ ಮಾಡಿಸುತ್ತಿದ್ದ ಧಾನ್ಯದರಾಶಿ ಬೆಟ್ಟದಷ್ಟು ಎತ್ತರವಾಗಿತ್ತು.

ವೃದ್ಧನು ಎರಡನೆಯವನನ್ನು ಸಮೀಪಿಸಿ, "ಸ್ವಾಮಿ ಒಂದಿಷ್ಟು ಗಂಜಿ ಮಾಡಿಕೊಂಡು ಕುಡಿಯುತ್ತೇನೆ. ಸ್ವಲ್ಪ ಧಾನ್ಯ ಕೊಡಿಸಿಕೊಡಿ" ಎಂದು ಕೇಳಿದ.

ಎರಡನೇಯವನು ಸಹ ವೃದ್ಧನನ್ನು ಗುರ್ತಿಸಲಿಲ್ಲ. "ಎಲ್ಲಿಯಾದರೂ ಹೋಗಿ

ಕಷ್ಟಪಟ್ಟು ಕೆಲಸ ಮಾಡದೆ ಬಿಕ್ಷೆಬೇಡಲು ಬಂದೆಯಾ? ದವಸ ಪುಕ್ಕಟೆಯಾಗಿ ಬಂದಿತೆಂದು ತಿಳಿದಿರುವಿಯಾ ಹೇಗೆ? ಹೋಗು ಇಲ್ಲಿಂದ ಕಾಲು ತೆಗೆ" ಎಂದು ಕೂಗಾಡಿದ.

ಮರುಕ್ಷಣವೇ ಹೊಲಗಳು ಮಾಯವಾದವು. ಧಾನ್ಯದ ರಾಶಿ, ಹುಲ್ಲಿನ ಮೆದೆಗಳು ಅದೃಶ್ಯವಾದವು. ಸುತ್ತಲೂ ದಟ್ಟವಾದ ಅಡವಿ ಬೆಳೆಯಿತು.

ಮೂರನೇಯ ದಿನ ಗುಡಿಸಲಿನ ಹತ್ತಿರ ಬಂದ ವೃದ್ಧ. "ಅಯ್ಯಾ, ಅತಿಥಿ ಬಂದಿದ್ದೇನೆ. ಒಂದುಹಿಡಿ ಅನ್ನವಿಡಿಯಪ್ಪಾ" ಎಂದ.

ಕಿರಿಯವನಿಗಾಗಲೀ, ಆತನ ಹೆಂಡತಿ ರಾಜಕುಮಾರಿಗಾಗಲೀ ಆ ವೃದ್ಧನ ಗುರುತು ಕೊಂಚವೂ ಸಿಕ್ಕಲಿಲ್ಲ.

"ಒಳಗೆ ಬಾ ತಾತಾ. ನಾವೇನು ಕೊಡಬಲ್ಲೆವಪ್ಪಾ ನಿನಗೆ. ಮಡಿಕೆಯಲ್ಲಿ ಒಂದಿಷ್ಟು ಗಂಜಿ ಇದೆ. ನಮ್ಮೊಂದಿಗೆ ನೀನೂ ಸಹ ಅದನ್ನೇ ಕುಡಿಯುವಿಯಂತೆ, ಒಳಗೆ ಬಾ" ಎಂದು ಬಹು ಪ್ರೀತಿಯಿಂದ ಕರೆದರು. ಅಲ್ಲಿ ಇಬ್ಬರೂ ಊಟಕ್ಕೆ ಕುಳಿತಿದ್ದರು.

ರಾಜಕುಮಾರಿ ವೃದ್ಧನನ್ನು ಕೂಡಿಸಿ ಗಂಜಿಯಿದ್ದ ಮಡಿಕೆಯ ಮುಚ್ಚಳ ತೆಗೆದಳು. ಇದೇನು ಸೋಜಿಗ! ಆ ಮಡಿಕೆಯಿಂದ ಸವುಟನ್ನು ಹೊರಗೆ ತೆಗೆಯಲು ಅದರಲ್ಲಿ ಷಡ್ರಸೋಪೇತವಾದ ಭಕ್ಷಗಳು ಕಾಣಿಸಿದವು. ಕೈಯಲ್ಲಿ ಹಿಡಿದಿದ್ದ ಸವುಟು ಬೆಳ್ಳಿಯದು! ಮಡಿಕೆ ಬಂಗಾರದ ಪಾತ್ರೆಯಾಗಿದೆ!

ಈ ಆಶ್ಚರ್ಯದಲ್ಲಿ ದಂಪತಿಗಳು ವೃದ್ಧನು ಏನಾದನೋ ಗಮನಿಸಲೇ ಇಲ್ಲ. ಆತನಿಗಾಗಿ ಸುತ್ತಲೂ ನೋಡಲು, ಅವನು ಕಾಣಲೇ ಇಲ್ಲ. ತಮ್ಮ ಗುಡಿಸಲಿಗೆ ಬದಲಾಗಿ ಮಹಾರಾಜರಿರುವಂತಹ ಅರಮನೆ ಕಾಣಿಸಿತು. ಎಲ್ಲಿ ನೋಡಿದರೂ, ಎತ್ತ ನೋಡಿದರೂ ಮಣಿ ಮಾಣಿಕ್ಯಗಳೂ, ಬೆಲೆಬಾಳುವ ವಸ್ತ್ರಗಳೂ, ಆಭರಣಗಳೂ ಕಂಡುಬಂದವು. ಆಗ ತಿಳಿಯಿತು ಅದೇ ಮಹಿಮೆಯ ಮುದುಕನೆಂದು.

ಆ ಅರಮನೆಯಲ್ಲಿ ಯಾವುದೊಂದೂ ಕೊರತೆಯಿರಲಿಲ್ಲ. ಆ ದಂಪತಿಗಳು ಅನೇಕ ವರ್ಷಗಳಕಾಲ ಬಹಳ ಸುಖವಾಗಿ ಧರ್ಮದಿಂದ ಸಂಸಾರ ಮಾಡಿಕೊಂಡಿದ್ದರು.



# ರತ್ನಗೋಳ (ಹಿಂಬದಿಯ ಚಿತ್ರಕಥೆ-೬)

ಆಬೆಸ್ತನು ಇನ್ನೇನು ಕ್ಷೇಮವಾಗಿ ಮೇಲೆ ಬರಬೇಕಾದ್ದೇ; ಅಷ್ಟರಲ್ಲಿ ಅವನ ಕಾಲನ್ನು ಒಂದು ಏಡಿ ಕಚ್ಚಿಹಿಡಿಯಿತು. ಈ ಗಡಿಬಿಡಿಯಲ್ಲಿ ನಿದ್ರಿಸಿಕೊಂಡಿದ್ದ ಭೂತಸರ್ಪಗಳಿಗೂ ಎಚ್ಚರವಾಯಿತು.

ಅಲ್ಲಿಯ ಕಾಂತಿ ಮಾಯವಾಗಿರುವುದನ್ನು ಕಾಣುತ್ತಲೇ ನಡೆದ ಸಂಗತಿಯನ್ನು ಭೂತಸರ್ಪಗಳು ಗ್ರಹಿಸಿದುವು. ದೊಡ್ಡದಾಗಿ ಭುಸುಗುಟ್ಟಿದುವು. ಭಯಂಕರವಾಗಿ ಸಮುದ್ರವನ್ನು ಅಪ್ಪಳಿಸಿ ನೀರನ್ನೆಲ್ಲ ಕಲಕಿಹಾಕಿದುವು. ತೆರೆಗಳು ಅಲ್ಲೋಲ ಕಲ್ಲೋಲ ಮಾಡಿಕೊಂಡು ಬೆಸ್ತನನ್ನು ಮುತ್ತಿಕೊಂಡುವು. ಕಾಲು ಸಿಕ್ಕಿಕೊಂಡ ಬೆಸ್ತನು ಗಬಗಬನೆ ರತ್ನಗೋಳವನ್ನು ತನ್ನ ಬಟ್ಟೆಯಲ್ಲಿ ಕಟ್ಟಿಕೊಂಡು, ಬಂಡೆಗಲ್ಲುಗಳ ನಡುವೆ ಅಡಗಿಕೊಂಡನು.

ಭೂತಸರ್ಪಗಳು ಎಷ್ಟು ಹುಡುಕಿದರೂ ಅವನು ಕಾಣಿಸಲಿಲ್ಲ. ಸ್ವಲ್ಪ ಹೊತ್ತಿಗೆ ಒಂದು ಭೂತಸರ್ಪವು ಈ ಬೆಸ್ತನ ಬಳಿಯಲ್ಲೇ ಸುಳಿದುಕೊಂಡು ಅತ್ತ ಓಡಿಹೋಯಿತು. ಆಗ ಅದಕ್ಕೆ ತಿಳಿಯದಂತೆಯೇ ಅದರ ಬಾಲವು ಬೆಸ್ತನ ದೇಹದ ಮೇಲೆ ಬಡಿಯಿತು. ಈ ಪೆಟ್ಟಿಗೆ ಅವನ ಕಾಲನ್ನು ಕಚ್ಚಿಕೊಂಡಿದ್ದ ಏಡಿಕೂಡ ಹೆದರಿ, ದೂರ ಓಡಿಹೋಯಿತು. ಅಂದಮೇಲೆ ಆ ಮುದಿಬೆಸ್ತನಿಗೆ ಎಷ್ಟು ಪೆಟ್ಟಾಗಿರಬೇಕು! ಆ ಏಟಿನಿಂದಲೇ ಅವನ ದೇಹ ಮೇಲಕ್ಕೆ ತೇಲಿಬಂತು. ಕೂಡಲೇ ಕಾಪ್ತಾನನು ಅವನನ್ನು ಹಡಗಿಗೆ ಸೇರಿಸಿಕೊಂಡ.

ಮುದುಕಬೆಸ್ತನು ಕೊನೆಯುಸಿರು ಬಿಡುತ್ತ, ರತ್ನಗೋಳವನ್ನು ಕಾಪ್ತಾನನಿಗೆ ಕೊಟ್ಟು—"ಕಾಪ್ತಾನ ದೊರೆ, ನನ್ನ ಕೆಲಸ ತೀರಿಹೋಯಿತು. ನಿಮ್ಮ ವಾಗ್ದಾನವನ್ನು ಮರೆಯಬೇಡಿ" ಎನ್ನುತ್ತಾ ಅಲ್ಲಿಯೇ ಬಿದ್ದು ಕಣ್ಣುಮುಚ್ಚಿದನು.

ಕಾಪ್ತಾನನು ಮಾತುತಪ್ಪಿಸುವವನಲ್ಲ. ಕೂಡಲೇ ಅವನು ಜಾಪಾನುತೀರಕ್ಕೆ ತನ್ನ ಹಡಗನ್ನು ತಿರುಗಿಸಿದನು. ಅಲ್ಲಿ ಚೀನಾರಾಣಿಯ ಇಷ್ಟದೇವಿಯ ಆಲಯವನ್ನು ಮುಟ್ಟಿ, ಅಮೂಲ್ಯವೂ ಅಪೂರ್ವವೂ ಆದ ಆ ರತ್ನಗೋಳವನ್ನು ಪೂಜಾರಿಯ ಕೈಗೆ ಕಾಣಿಕೆಯಾಗಿ ಕೊಟ್ಟು ಸ್ವದೇಶಕ್ಕೆ ಹಿಂದಿರುಗಿದನು.

ಕಾಪ್ತಾನನು ಚೀನಾರಾಣಿಯ ಮುಂದೆ ಬಂದು, ಆ ರತ್ನಗೋಳದ ಸಂಗತಿಯನ್ನೆಲ್ಲಾ ಹೇಳಿದನು. ತನ್ನ ಪ್ರಾಣವನ್ನೇ ಬಲಿಗೊಟ್ಟ ಆ ಬೆಸ್ತನಿಗೆ ತಾನು ಕೊಟ್ಟ ವಾಗ್ದಾನವನ್ನೂ ವಿವರಿಸಿದನು. ರಾಣಿ ಕೂಡಲೇ ಆ ಬೆಸ್ತಕುಮಾರನನ್ನು ಕರೆಯಿಸಿ ಗೌರವಿಸಿ, ಚಕ್ರವರ್ತಿಯ ಹಡಗಿಗೇ ಕಾಪ್ತಾನನನ್ನಾಗಿ ನಿಯಮಿಸಿದಳು.

(ಮುಗಿಯಿತು)

## ಫೋಟೋ ಶೀರ್ಷಿಕೆಯ ಸ್ಪರ್ಧೆ :: ಬಹುಮಾನ 10 ರೂ.

1954 ಡಿಸೆಂಬರ್ ಸಂಚಿಕೆಯಲ್ಲಿ ಪ್ರಕಟಿಸುವ ಫೋಟೋಗಳ ಮಾದರಿ :





ಮೇಲಿನ ಫೋಟೋಗಳಿಗೆ ಒಂದಕ್ಕೊಂದು ಸಂಬಂಧಿಸಿದಂತಿರುವ ಒಂದು ಜತೆ (ಎರಡು) ಶೀರ್ಷಿಕೆಗಳನ್ನು ಪೋಸ್ಟು ಕಾರ್ಡಿನಲ್ಲಿ ಬರೆದು ಈ ಕೆಳಗಿನ ವಿಳಾಸಕ್ಕೆ, ಅಕ್ಟೋಬರ್ 7 ನೇ ತಾರೀಕಿನೊಳಗೆ ನಮಗೆ ಬಂದು ತಲಪುವಂತೆ ಕಳಿಸತಕ್ಕದ್ದು. ನಂತರ ಬಂದವುಗಳನ್ನು ಗಮನಿಸುವುದಿಲ್ಲ. ವಿಳಾಸ : ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದ್ರಾಸು-26.

---

### ಈ ತಿಂಗಳ ಫೋಟೋ ಶೀರ್ಷಿಕೆಯ ಸ್ಪರ್ಧೆಯ ಫಲಿತ

ಮೊದಲನೇ ಫೋಟೋ : ನೂಲಿಲ್ಲದ ಬಲೆಯಲ್ಲಿ

ಎರಡನೇ ಫೋಟೋ : ನೀರಿಲ್ಲದ ಅಲೆಯಲ್ಲಿ

ಕಳಿಸಿದವರು : ಪಿ. ಪುರುಷೋತ್ತಮ ಸರಳಾಯ, C/o ಪಿ. ಜಿ. ಕೆ. ಸರಳಾಯ
ಪಲ್ಲಂ, ಕಾಸರಗೋಡು ದ. ಕ.

ಬಹುಮತಿ ರೂ. 10/- ನ್ನು ಈ ತಿಂಗಳಿನಲ್ಲಿ ಕಳುಹಿಸಲ್ಪಡುತ್ತದೆ.



# ವಾರ್ತೆಗಳು-ವಿಶೇಷಗಳು

೧೯೫೫ನೇ ಮಾರ್ಚ್ ತಿಂಗಳಿನಲ್ಲಿ ಹೈಸ್ಕೂಲುಗಳಿಗಾಗಿ ಏರ್ಪಡಿಸಿದ ನ್ಯೂಯಾರ್ಕ್ ಹೆರಾಲ್ಡ್ ಟ್ರಿಬ್ಯೂನ್ ಫೋರಮ್‌ನಲ್ಲಿ (ಚರ್ಚಾಕೂಟ) ಭಾಗವಹಿಸಲು ಒಬ್ಬ ವಿದ್ಯಾರ್ಥಿಯನ್ನು ಕಳುಹಿಸಬೇಕೆಂಬ ಆಹ್ವಾನವನ್ನು ಇಂಡಿಯಾ ಸರಕಾರವು ಅಂಗೀಕರಿಸಿದೆ.

*   *   *

ಶಿರಸಿ ತಾಲೂಕಿನ ದೀಪನಹಳ್ಳಿಯ ಶ್ರೀ ಸುಬ್ರಾಯ ತಿಮ್ಮಯ್ಯ ಹೆಗಡೆಯವರು ೫೧ ಸಾವಿರ ರೂಪಾಯಿಗಳನ್ನು ಬೇಸಾಯಗಾರರ ವಿದ್ಯಾರ್ಥಿಗಳಿಗೆ "ವಿದ್ಯಾರ್ಥಿ ಗೃಹ"ವನ್ನು ಸ್ಥಾಪಿಸುವ ಸಲುವಾಗಿ ದಾನಮಾಡಿದ್ದಾರೆ.

*   *   *

ಎರಡನೆಯ ಪಂಚವಾರ್ಷಿಕ ಯೋಜನೆಯ ಅಂಗವಾಗಿ ಇಂಡಿಯಾದೇಶದಲ್ಲಿ ಐನೂರು ಗೋಶಾಲೆಗಳನ್ನು ತೆರೆದು ನಡೆಸಲಿದ್ದಾರೆಂದು ತಿಳಿದು ಬರುತ್ತದೆ.

ಬೀದಿಯಲ್ಲಿ ಚಿಕ್ಕಮಕ್ಕಳನ್ನು ದಾಟಿಸುವುದಕ್ಕಾಗಿ ಒಂದು ಸ್ವಯಂಸೇವಕ ದಳವನ್ನು ಬೊಂಬಾಯಿಯಲ್ಲಿ ತಯಾರಿಸಿದ್ದಾರೆ.

*   *   *

ಕೌಟಿಲ್ಯನ ಅರ್ಥಶಾಸ್ತ್ರವನ್ನು ರಷಿಯನ್ ಭಾಷೆಯಲ್ಲಿ ಭಾಷಾಂತರ ಮಾಡುತ್ತಿದ್ದಾರೆ.

*   *   *

ಹೈದ್ರಾಬಾದ ಉಸ್ಮಾನಿಯಾ ವಿಶ್ವವಿದ್ಯಾಲಯದಲ್ಲಿ ಈ ವರ್ಷದಿಂದ 'ಪತ್ರಿಕೋದ್ಯಮ' ವಿಷಯಕವಾದ ಅಭ್ಯಾಸಕ್ರಮವನ್ನು ಕೂಡ ಪ್ರಾರಂಭಿಸಿರುತ್ತಾರೆ.

*   *   *

ಒಬ್ಬನಿಂದಾಗದಷ್ಟು ಬಡಗಿ ಕೆಲಸವನ್ನು ವಿಜಾಪುರದ ಚಿಮ್ಮಲಗಿಯ ಶ್ರೀ ಕೃಷ್ಣಪ್ಪ ಶಂಕರಪ್ಪ ಬಡಗೀರ ಇವರು, ಬೆಳಗ್ಗೆಯಿಂದ ಸಂಜೆಯವರೆಗೆ ಮಾಡಿದರು. ಅದಕ್ಕೆ ಆ ಊರವರು ಅವರಿಗೆ ೨೦೧ ರೂಪಾಯಿ, ಬಟ್ಟೆ, ಬೆಳ್ಳಿ ಕಡಗ ಕೊಟ್ಟು, ಸನ್ಮಾನಿಸಿದರು.



ಅಣುಶಕ್ತಿಯಿಂದ ಭೂಮಿಯಲ್ಲಿ ಒಂದು ಪ್ರಾಣಿಯೂ ಇಲ್ಲದಂತೆ ಮಾಡಬಹುದೆಂದು ಶಾಸ್ತ್ರವೇತ್ತರು ಪ್ರಕಟಿಸಿದ್ದಾರೆ. ಆದುದರಿಂದ ಪ್ರಪಂಚ ಯುದ್ಧವು ಅಣುಬಾಂಬುಗಳಿಂದ ಜರುಗಿದರೆ ಬಹಳ ಅಪಾಯವಿದೆ. ಅದಕ್ಕಾಗಿಯೇ ಪ್ರಪಂಚ ಶಾಂತಿಗೋಸ್ಕರ ಅನೇಕ ಮಂದಿ ಪಾಡುಪಡುತ್ತಾರೆ. ಅಂತಹರಲ್ಲಿ ನಮ್ಮ ಭಾರತ ಪ್ರಧಾನಿ ನೆಹರೂರವರು ಒಬ್ಬರು. ಇವರು ಇತ್ತೀಚಿಗೆ ಚೀಣಾ ಪ್ರಧಾನಿ ಚೌ-ಎನ್-ಲಾಯ್‌ಯವರನ್ನು ನಮ್ಮ ದೇಶಕ್ಕೆ ಆಹ್ವಾನಿಸಿ ಪ್ರಪಂಚಶಾಂತಿಯನ್ನು ಕಾಪಾಡಿಕೊಳ್ಳುವಂತಹ ಚರ್ಚೆಯನ್ನು ನಡೆಸಿದರು. ಆಸಿಯಾ ಖಂಡದಲ್ಲಿ ಇಂಡಿಯಾ ಚೀಣಾ ದೇಶಗಳು ಪ್ರಪಂಚದ ದೊಡ್ಡ ದೇಶಗಳಿಗೆ ಸೇರಿದುವಾಗಿವೆ. ಪ್ರಪಂಚದ ಜನಸಂಖ್ಯೆ ೨೦೦ ಕೋಟಿಗೆ ಮೀರಿದೆ. ಅದರಲ್ಲಿ ೯೬ ಕೋಟಿ ಚೀಣಾ, ಇಂಡಿಯಾಗಳಲ್ಲಿಯೇ ಇದ್ದಾರೆ. ಅಂತೆಯೇ ಈ ದೇಶದ ನಾಯಕರ ಪ್ರಯತ್ನವು ಮಹತ್ವದ್ದಾಗಿದೆ.

*   *   *

ವಿದ್ಯಾರ್ಥಿಗಳಿಗೆ ವೈಮಾನಿಕ ಶಿಕ್ಷಣವನ್ನು ಕೊಡಲು ಭಾರತಸರಕಾರವು ಬೊಂಬಾಯಿ, ಕಲಕತ್ತಾ, ಮದರಾಸು, ಢಿಲ್ಲಿ, ಜಲಂದರ್, ಕಾನ್‌ಪೂರ್, ಪಾಟ್ನಾ ಮತ್ತು ನಾಗ್‌ಪೂರ್‌ಗಳಲ್ಲಿ ವ್ಯವಸ್ಥೆ ಮಾಡಿರುತ್ತದೆ.

ಕೊಟ್ಟಾಯಂ ಎಂಬ ಊರಿಗೆ ಸಮೀಪವಾಗಿ ರೈಲ್ವೇ ದಾರಿಯನ್ನು ನಿರ್ಮಿಸುತ್ತಿರುವಾಗ ಒಂದು ಗುಹೆಯು ಶೋಧಿಸಲ್ಪಟ್ಟಿತು. ಇದರ ಉದ್ದ ಒಂದೂವರೆ ಮೈಲು; ಎತ್ತರ ಐದೂವರೆ ಅಡಿ; ಅಗಲ ಹದಿನೆಂಟು ಅಡಿ. ಈ ಗುಹೆ ಮುಂದುವರಿದು ಆದಿತೀಯ ದೇವಾಲಯಕ್ಕೆ ಹೋಗಿ ಸೇರುತ್ತದಂತೆ.

*   *   *

ದಕ್ಷಿಣ ಕನ್ನಡ ಜಿಲ್ಲೆಯ ನಾಗೋಡಿಯ ಸಮೀಪದಲ್ಲಿ ಬಸ್ಸು ಹೋಗುವಾಗ ಒಂದು ಪಟ್ಟೆಹುಲಿ ಎದುರಾಯಿತು. ಇದು ಅನೇಕ ದಿನಗಳಿಂದ ಗ್ರಾಮಸ್ಥರಿಗೆ ಉಪದ್ರ ಕೊಡುತ್ತಿದ್ದ ಪಟ್ಟೆಹುಲಿ ಎಂದು ತಿಳಿಯಿತು. ಡ್ರೈವರನು ಬಸ್ಸು ನಿಲ್ಲಿಸಿ ಪ್ರಯಾಣಿಕರೊಂದಿಗೆ ಆ ಹುಲಿಯನ್ನು ಕಲ್ಲಿನಿಂದಲೇ ಹೊಡೆದನು. ಎಲ್ಲರೂ ಕೂಡಿ ಕಲ್ಲಿನಿಂದ ಹೊಡೆದೇ ಅದನ್ನು ಕೊಂದರು.

*   *   *

ವಿದೇಶಗಳಲ್ಲಿ ಅರಬ್ಬಿ, ಫ್ರೆಂಚ, ಚೀನಿ, ಇಟಲಿ, ಜರ್ಮನಿ, ಜಪಾನಿ, ಪರ್ಷಿಯನ್ ಹಾಗು ಇತರ ಭಾಷೆಗಳಲ್ಲಿ ತಕ್ಕ ಅಭ್ಯಾಸ ನಡೆಸಿ ಹೆಚ್ಚು ಜ್ಞಾನ ಪಡೆಯಲು ಇಂಡಿಯಾ ಸರಕಾರವು ೩೦ ವಿದ್ಯಾರ್ಥಿ ವೇತನಗಳನ್ನು ಕೊಡಲಿಕ್ಕೆ ನಿರ್ಧರಿಸಿದೆ.



## ಚಿತ್ರ ಕಥೆ



ಹೊರಗೆ ಮಳೆ ಹನಿಕುತಿತ್ತು. ಕಿಟ್ಟೂ, ಗೋಪೂ ಮನೆಯೊಳಗೇ ಚೆಂಡಾಡಲು ಪ್ರಾರಂಭಿಸಿದರು. 'ಟೈಗರ್' ನಾಯಿಯೂ ಚೆಂಡಿನೊಂದಿ[illegible]ಾರುತಿತ್ತು. ಚೆಂಡು ಹಲಗೆಯಲ್ಲಿರುವ ಸಾಮಾನಿನ ಬುಟ್ಟಿಗೆ ತಾಗಿ ಆದರೊಳಗಿದ್ದ [illegible] ಹೊರಗೆಬಂತು. 'ಅದನ್ನು ಕೊಲ್ಲುತ್ತೇನೀಗ' ಎಂದು ಕಿಟ್ಟು ಚೆಂಡನ್ನು ಬಲವಾಗಿ ಬೀಸಿದ.




ಚೆಂಡು ಆ ರಂಗೋಲೀಬುಟ್ಟಿಗೆ ತಾಕಿತು. ಆಗಲೇ ಕಸಪರಿಕೆಯೊಂದಿಗೆ ಒಳಗೆ ಬರುತ್ತಿರುವ ಕೆಲಸದವಳ ತಲೇ ಮೇಲೆ ಮಗುಚಿಬಿತ್ತು ಆ ಬುಟ್ಟಿ! ಇನ್ನು ತಮಗೆ ಒದೆ ತಪ್ಪದೆಂದುಕೊಂಡು ಕಿಟ್ಟೂ, ವಾಸೂ "ಅಯ್ಯಮ್ಮೊ! ದೆವ್ವಾ!" ಎಂದು ಅರಚುತ್ತಾ ಹೊರಗೆ ಓಡಿಹೋದರು!

Printed by B. NAGI REDDI at the B. N. K. Press Ltd., Madras 26, and Published by him for Chandamama Publications, Madras 26. Controlling Editor: SRI 'CHAKRAPANI'

Photo by A. L. Syed



ಬಹುಮಾನ
ಪಡೆದ ಶೀರ್ಷಿಕೆ

ನೀರಿಲ್ಲದ ಅಲೆಯಲ್ಲಿ

ಕಳಿಸಿದವರು:
ಪಿ. ಪುರುಷೋತ್ತಮ ಸರಳಾಯ

